ದಾದಾ ಭಗವಾನರ ನಿರೂಪಣೆ

# ಕ್ರೋಧ



Kannada

ಕ್ರೋಧ ಅಂದರೆ; ಪ್ರಕಟಗೊಂಡ ಅಗ್ನಿಯಂತೆ. ಮೊದಲಿಗೆ ತನ್ನನ್ನು ಸುಡುವುದರ ಜೊತೆಗೆ ಮತ್ತೊಬ್ಬರನ್ನೂ ಸುಡುತ್ತದೆ.

**ಪ್ರಕಾಶಕರು:** ಶ್ರೀ ಅಜಿತ್ ಭಾಯ್ ಸಿ. ಪಟೇಲ್

ದಾದಾ ಭಗವಾನ್ ವಿಜ್ಞಾನ ಫೌಂಡೇಶನ್

1, ವರುಣ್ ಅಪಾರ್ಟ್ಮೆಂಟ್, 37, ಶ್ರೀಮಾಲಿ ಸೊಸೈಟಿ,

ನವರಂಗಪುರ ಪೊಲೀಸ್ ಸ್ಟೇಷನ್ ಎದುರು, ನವರಂಗಪುರ,

ಅಹಮದಾಬಾದ್ - 380009

ಗುಜರಾತ್, ಭಾರತ.

**ಫೋನ್:** +91 79 3500 2100



**ಪ್ರಥಮ ಆವೃತ್ತಿ** : ನವೆಂಬರ್ 2024

**ಪ್ರತಿಗಳು** : 500

**ಭಾವ ಮೌಲ್ಯ** : 'ಪರಮ ವಿನಯ ಹಾಗೂ ನಾನು ಏನನ್ನೂ ತಿಳಿದಿಲ್ಲ' ಎಂಬ ಭಾವನೆ!

**ದ್ರವ್ಯ ಮೌಲ್ಯ** : 40 ರೂಪಾಯಿ

**ಮುದ್ರಣ** : ಅಂಬಾ ಮಲ್ಟಿಪ್ರಿಂಟ್, ಹೆಚ್.ಬಿ.ಕಾಪಡಿಯ ನ್ಯೂ ಹೈಸ್ಕೂಲ್ ಎದುರು,

ಛತ್ರಲ -ಪ್ರತಾಪಪುರ ರೋಡ್, ಛತ್ರಲ, ತಾ. ಕಲೋಲ್,

ಜಿ. ಗಾಂಧಿನಗರ -382729

ಗುಜರಾತ್, ಭಾರತ.

**ಫೋನ್:** +91 79 3500 2142

ISBIN No : **978-93-91375-57-7**

**Printed in India**

# ತ್ರಿಮಂತ್ರ




ನಮೋ ಅರಿಹಂತಾಣಂ

ನಮೋ ಸಿದ್ಧಾಣಂ

ನಮೋ ಆಯರಿಯಾಣಂ

ನಮೋ ಉವಜ್ಝಾಯಾಣಂ





ನಮೋ ಲೋಯೆ ಸವ್ವಸಾಹೂಣಂ

ಏಸೋ ಪಂಚ ನಮುಕ್ಕಾರೋ;

ಸವ್ವ ಪಾವಪ್ಪಣಾಸಣೋ

ಮಂಗಲಾಣಂ ಚ ಸವ್ವೇಸಿಂ;

ಪಢಮಂ ಹವಯಿ ಮಂಗಲಂ

ॐ ನಮೋ ಭಗವತೇ ವಾಸುದೇವಾಯ

ॐ ನಮಃ ಶಿವಾಯ

ಜೈ ಸಚ್ಚಿದಾನಂದ್



# ‘ದಾದಾ ಭಗವಾನ್’ ಯಾರು?

೧೯೫೮ರ ಜೂನ್ ಮಾಸದ ಒಂದು ಸಂಜೆ, ಸುಮಾರು ಆರು ಗಂಟೆಯಾಗಿರಬಹುದು. ಜನಜಂಗುಳಿಯಿAದ ತುಂಬಿಹೋಗಿದ್ದ ಸೂರತ್ ಪಟ್ಟಣದ ರೈಲ್ವೇ ನಿಲ್ದಾಣದ ಪ್ಲಾಟ್‌ಫಾರ್ಮ್ ಸಂ. ೩ರ ಒಂದು ಬೆಂಚಿನ ಮೇಲೆ ಶ್ರೀ ಎ. ಎಮ್. ಪಟೇಲ್ ಎಂಬ ಹೆಸರಿನ ದೇಹರೂಪಿ ಮಂದಿರದಲ್ಲಿ ಅಕ್ರಮ ರೂಪದಲ್ಲಿ, ಪ್ರಕೃತಿಯ ಲೀಲೆಯಂತೆ, ‘ದಾದಾ ಭಗವಾನ್’ರವರು ಸಂಪೂರ್ಣವಾಗಿ ಪ್ರಕಟರಾದರು. ಪ್ರಕೃತಿಯು ಅಧ್ಯಾತ್ಮದ ಅದ್ಭುತ ಆಶ್ಚರ್ಯವನ್ನು ಸೃಷ್ಟಿಸಿತು. ಒಂದು ಗಂಟೆಯೊಳಗೆ ಅವರಿಗೆ ವಿಶ್ವದರ್ಶನವಾಯಿತು. ‘ನಾನು ಯಾರು? ದೇವರು ಯಾರು? ಜಗತ್ತನ್ನು ನಡೆಸುವವರು ಯಾರು? ಕರ್ಮ ಎಂದರೆ ಏನು? ಮುಕ್ತಿ ಎಂದರೆ ಏನು?’ ಎಂಬ ಜಗತ್ತಿನ ಎಲ್ಲಾ ಆಧ್ಯಾತ್ಮಿಕ ಪ್ರಶ್ನೆಗಳ ಸಂಪೂರ್ಣ ರಹಸ್ಯ ಪ್ರಕಟಗೊಂಡಿತು. ಈ ರೀತಿ, ಪ್ರಕೃತಿಯು ಜಗತ್ತಿನ ಮುಂದೆ ಒಂದು ಅದ್ವಿತೀಯ ಪೂರ್ಣ ದರ್ಶನವನ್ನು ಪ್ರಸ್ತುತಪಡಿಸಿತು ಹಾಗು ಇದಕ್ಕೆ ಒಂದು ಮಾಧ್ಯಮವಾದರು, ಗುಜರಾತಿನ ಚರೋತರ್ ಪ್ರದೇಶದ ಭಾದರಣ್ ಎಂಬ ಹಳ್ಳಿಯ ಪಟೇಲರಾಗಿದ್ದ, ವೃತ್ತಿಯಲ್ಲಿ ಕಾಂಟ್ರಾಕ್ಟರಾಗಿದ್ದ, ಸಂಪೂರ್ಣವಾಗಿ ರಾಗದ್ವೇಷದಿಂದ ಮುಕ್ತರಾಗಿದ್ದ ಶ್ರೀ ಎ. ಎಮ್. ಪಟೇಲ್‌ರವರು!

‘ವ್ಯಾಪಾರದಲ್ಲಿ ಧರ್ಮವಿರಬೇಕು, ಧರ್ಮದಲ್ಲಿ ವ್ಯಾಪಾರವಲ್ಲ’, ಎಂಬ ಸಿದ್ಧಾಂತದ ಪಾಲನೆ ಮಾಡುತ್ತಾ ಇವರು ಇಡೀ ಜೀವನವನ್ನು ಕಳೆದರು. ಜೀವನದಲ್ಲಿ ಅವರು ಯಾರಿಂದಲೂ ಹಣ ತೆಗೆದುಕೊಳ್ಳಲಿಲ್ಲವಷ್ಟೇ ಅಲ್ಲ, ತಮ್ಮ ಭಕ್ತರಿಗೆ ತಮ್ಮ ಸಂಪಾದನೆಯ ಹಣದಲ್ಲಿ ಯಾತ್ರೆ ಮಾಡಿಸುತ್ತಿದ್ದರು.

ಅವರು ಅನುಭವಿಗಳಾಗಿದ್ದರು. ಅದೇ ರೀತಿ, ಅವರು ಸಿದ್ಧಿಸಿಕೊಂಡ ಅದ್ಭುತವಾದ ಜ್ಞಾನಪ್ರಯೋಗದ ಮೂಲಕ ಕೇವಲ ಎರಡೇ ಗಂಟೆಗಳಲ್ಲಿ ಬೇರೆ ಮುಮುಕ್ಷುಗಳಿಗೂ ಸಹ ಆತ್ಮಜ್ಞಾನದ ಅನುಭವ ಉಂಟಾಗುವಂತೆ ಮಾಡುತ್ತಿದ್ದರು. ಇದನ್ನು ಅಕ್ರಮ ಮಾರ್ಗ ಎಂದು ಕರೆಯಲಾಯಿತು. ಅಕ್ರಮ, ಅದರರ್ಥ ಯಾವುದೇ ಕ್ರಮವಿಲ್ಲದ ಹಾಗು ಕ್ರಮ ಎಂದರೆ ಹಂತ ಹಂತವಾಗಿ, ಒಂದರ ನಂತರ ಒಂದರAತೆ ಕ್ರಮವಾಗಿ ಮೇಲೇರುವುದು ಎಂದು. ಅಕ್ರಮ ಎಂದರೆ ಲಿಫ್ಟ್ ಮಾರ್ಗ, ಒಂದು ಶಾರ್ಟ್‌ಕಟ್. ಅವರು ತಾವೇ ಪ್ರತಿಯೊಬ್ಬರಿಗೂ ‘ದಾದಾ ಭಗವಾನ್ ಯಾರು?’ ಎಂಬುದರ ರಹಸ್ಯದ ಬಗ್ಗೆ ಹೇಳುತ್ತಾ ನುಡಿಯುತ್ತಿದ್ದರು “ನಿಮ್ಮ ಎದುರು ಕಾಣುತ್ತಿರುವವರು ‘ದಾದಾ ಭಗವಾನ್’ ಅಲ್ಲ. ನಾನು ಜ್ಞಾನಿ ಪುರುಷ. ನನ್ನೊಳಗೆ ಪ್ರಕಟಗೊಂಡಿರುವವರು ‘ದಾದಾ ಭಗವಾನ್’. ದಾದಾ ಭಗವಾನ್ ಹದಿನಾಲ್ಕು ಲೋಕಗಳಿಗೂ ಒಡೆಯರು. ಅವರು ನಿಮ್ಮಲ್ಲೂ ಇದ್ದಾರೆ, ಎಲ್ಲರಲ್ಲೂ ಇದ್ದಾರೆ. ನಿಮ್ಮಲ್ಲಿ ಅವ್ಯಕ್ತರೂಪದಲ್ಲಿದ್ದಾರೆ ಮತ್ತು ‘ಇಲ್ಲಿ’ ನನ್ನೊಳಗೆ ಸಂಪೂರ್ಣ ರೂಪದಲ್ಲಿ ಪ್ರಕಟಗೊಂಡಿದ್ದಾರೆ. ದಾದಾ ಭಗವಾನ್‌ರವರಿಗೆ ನಾನೂ ನಮಸ್ಕಾರ ಮಾಡುತ್ತೇನೆ.”

# ಸಂಪಾದಕೀಯ

ಕ್ರೋಧ, ಇದು ಒಂದು ಬಗೆಯ ದೌರ್ಬಲ್ಯವಾಗಿದೆ. ಆದರೆ, ಅದನ್ನು ಜನರು ಶೌರ್ಯವೆಂದು ತಿಳಿದಿದ್ದಾರೆ. ಕ್ರೋಧಗೊಳ್ಳುವವರಿಗಿಂತಲೂ ಕ್ರೋಧಗೊಳ್ಳದೆ ಇರುವವರ ಪ್ರತಾಪದ ಪ್ರಭಾವವೇ ಬೇರೆ!

ಸಾಮಾನ್ಯವಾಗಿ ಯಾವಾಗ ನಮಗೆ ಬೇಕಾದ ಹಾಗೆ ನಡೆಯುವುದಿಲ್ಲ, ನಮ್ಮ ಮಾತನ್ನು ಮತ್ತೊಬ್ಬರು ಯಾವಾಗ ಅರ್ಥಮಾಡಿಕೊಳ್ಳುವುದಿಲ್ಲ, ಆಗ difference of view point(ದೃಷ್ಟಿಕೋನದ ವ್ಯತ್ಯಾಸವು) ಉದ್ಭವಿಸುತ್ತದೆ. ಆಗ, ಕ್ರೋಧಗೊಂಡು ಬಿಡಲಾಗುತ್ತದೆ. ಬಹಳಷ್ಟು ಬಾರಿ ನಮಗೆ ಸರಿ ಅನ್ನಿಸಿರುವುದನ್ನು ಬೇರೆಯವರು ತಪ್ಪೆಂದು ಹೇಳಿದಾಗ ನಮಗೆ ಕ್ರೋಧ ಉಂಟಾಗುವುದು. ಆದರೆ, ಯಾವುದು ನಮಗೆ ಸರಿಯೆಂದು ಅನ್ನಿಸುತ್ತದೆ, ಅದು ನಮ್ಮ ದೃಷ್ಟಿಕೋನದಿಂದಾಗಿಯೇ ಅಲ್ಲವೇ? ಅದೇ ರೀತಿ ಮತ್ತೊಬ್ಬರ ದೃಷ್ಟಿಕೋನದಿಂದ ಅವರದ್ದೇ ಸರಿಯೆಂದು ಅವರು ಭಾವಿಸುತ್ತಾರೆ. ಅಲ್ಲವೇ? ಬಹಳಷ್ಟು ಬಾರಿ ನಮಗೆ ಏನೂ ತಿಳಿಯದೇ ಹೋದಾಗ, ಮುಂದೇನೆಂದು ಗೋಚರಿಸದೇ ಹೋದಾಗ, ಏನು ಮಾಡಬೇಕೆಂದು ತೋಚದಿದ್ದಾಗ ಕ್ರೋಧ ಉಂಟಾಗುವುದು.

ಅವಮಾನವಾದಾಗ ಕ್ರೋಧ ಉಂಟಾಗುತ್ತದೆ, ನಷ್ಟ ಅನುಭವಿಸುವಾಗ ಕ್ರೋಧ ಉಂಟಾಗುತ್ತದೆ. ಅದೇ ರೀತಿ, ಮಾನ ಕಾಪಾಡಿಕೊಳ್ಳುವ ಸಲುವಾಗಿ ಹಾಗೂ ಲೋಭದ ರಕ್ಷಣೆ ಮಾಡಿಕೊಳ್ಳುವ ಸಲುವಾಗಿ ಕ್ರೋಧ ಉಂಟಾಗಿಬಿಡುತ್ತದೆ. ಅಲ್ಲಿ ನಿಜವಾಗಿ, ಈ ಮಾನ ಹಾಗೂ ಲೋಭಗಳೆಂಬ ಕಷಾಯಗಳಿಂದ ಮುಕ್ತರಾಗಬೇಕೆಂಬ ಜಾಗೃತಿಯನ್ನು ತಂದುಕೊಳ್ಳ ಬೇಕಾಗಿರುವುದು ಬಹಳ ಅಗತ್ಯವಾಗಿದೆ. ಮನೆಯಲ್ಲಿ ಕೆಲಸದವನ ಕೈಯಿಂದ ಗಾಜಿನ ತಟ್ಟೆ-ಲೋಟ ಒಡೆದು ಹೋದರೆ, ಅವನ ಮೇಲೆ ಕೋಪ ತೋರಿಸಲಾಗುತ್ತದೆ. ಆದರೆ, ಅದೇ ಅಳಿಯನ ಕೈಯಿಂದ ಒಡೆದು ಹೋದಾಗ, ಏನು ಮಾಡುತ್ತೀರಿ? ಆಗ, ಕೋಪವನ್ನು ಕಂಟ್ರೋಲ್ ಮಾಡುವುದಾಗಿದೆ! ಅಂದರೆ, ಎಲ್ಲವೂ ನಮ್ಮ belief(ನಂಬಿಕೆಯ) ಆಧಾರದ ಮೇಲೆ ಎಂದಾಯಿತ್ತಲ್ಲವೇ?

ನಮಗೆ ಯಾರಾದರೂ ನಷ್ಟ ಉಂಟುಮಾಡಿದರೆ ಅಥವಾ ಅವಮಾನ ಮಾಡಿದರೆ, ಅದು ನಮ್ಮದೇ ಕರ್ಮದ ಫಲವಾಗಿರುತ್ತದೆ, ಹಾಗೂ ಮತ್ತೊಬ್ಬರು ಅದಕ್ಕೊಂದು ನಿಮಿತ್ತರಾಗಿದ್ದಾರೆ ಎನ್ನುವಂತಹ ತಿಳುವಳಿಕೆಯನ್ನು ನಾವು ಹೊಂದಲಾಗಿದ್ದರೆ, ಆಗ ಕ್ರೋಧಗೊಳ್ಳುವುದು ಹೊರಟು ಹೋಗುತ್ತದೆ.

ಎಲ್ಲೆಲ್ಲಿ ಹಾಗೂ ಯಾವಾಗೆಲ್ಲಾ ಕ್ರೋಧ ಉಂಟಾಗುವುದೋ, ಅವೆಲ್ಲವನ್ನು ನೋಂದಣಿಸಿಕೊಳ್ಳುವಷ್ಟು ಜಾಗೃತರಾಗಿ ನಾವು ಇರಬೇಕಾಗುತ್ತದೆ. ಹಾಗೂ ನಮ್ಮ ಕ್ರೋಧದಿಂದಾಗಿ ಯಾರಿಗೆಲ್ಲಾ ದುಃಖ ನೀಡಲಾಗಿರುವುದೋ, ಅದರ ಪ್ರತಿಯಾಗಿ ನಾವು ಪ್ರತಿಕ್ರಮಣ ಮಾಡಬೇಕು. ಪಶ್ಚಾತ್ತಾಪ ಪಟ್ಟು, ಇನ್ಮೇಲೆ ಕ್ರೋಧಗೊಳ್ಳಬಾರದೆಂದು

ನಿಶ್ಚಯಿಸಿಬೇಕು. ನಾವು ಯಾರ ಮೇಲೆ ಕ್ರೋಧಗೊಳ್ಳುತ್ತೇವೋ ಅವರಿಗೆ ನಮ್ಮಿಂದ ದುಃಖ ಉಂಟಾಗುವುದೇ ಆಗಿದೆ. ನಂತರ ಅವರು ನಮ್ಮ ಮೇಲೆ ವೈರತ್ವ ಕಟ್ಟಿಕೊಳ್ಳುತ್ತಾರೆ. ಅದರಿಂದಾಗಿ, ಜನ್ಮಜನ್ಮಾಂತರದವರೆಗೂ ನಾವು ಸಂಸಾರದಲ್ಲೇ ಅಲೆದಾಡಿಕೊಂಡು ಇರಬೇಕಾಗುತ್ತದೆ!

ಅಮ್ಮ-ಅಪ್ಪ ತಮ್ಮ ಮಕ್ಕಳ ಮೇಲೆ ಹಾಗೂ ಗುರುಗಳು ತಮ್ಮ ಶಿಷ್ಯರ ಮೇಲೆ ಕ್ರೋಧಗೊಳ್ಳುವ ವಿಚಾರ ಬೇರೆ. ಅದರಿಂದ ಅವರು ಪುಣ್ಯ ಕಟ್ಟಿಕೊಳ್ಳುತ್ತಾರೆ. ಯಾಕೆಂದರೆ, ಅಲ್ಲಿ ಅವರ ಉದ್ದೇಶವೇನು? ಮಕ್ಕಳ ಒಳಿತಿಗಾಗಿ, ಶಿಷ್ಯರ ಒಳಿತಿಗಾಗಿ, ಅವರ ಸುಧಾರಣೆಗಾಗಿಯೇ ಆಗಿದೆ. ಸ್ವಾರ್ಥಕ್ಕಾಗಿ ಮತ್ತೊಬ್ಬರ ಮೇಲೆ ಕ್ರೋಧಗೊಂಡರೆ, ಆಗ ಪಾಪ ಕಟ್ಟಿಕೊಳ್ಳಲಾಗುತ್ತದೆ! ವಿತರಾಗಿಗಳ(ತೀರ್ಥಂಕರರ) ಅರಿವಿನ ಸೂಕ್ಷ್ಮತೆ ಎಷ್ಟರ ಮಟ್ಟಿಗಿದೆ ನೋಡಿ !!!

ಪ್ರಸ್ತುತ ಗ್ರಂಥದಲ್ಲಿ ಈ ಕ್ರೋಧ ಬಹಳಷ್ಟು ಗೊಂದಲಕ್ಕೆ ಸಿಲುಕಿಸುವಂತಹ, ವ್ಯಕ್ತವಾಗಿ ಕಂಡುಬರುವ ಕಷಾಯವಾಗಿದೆ. ಅವೆಲ್ಲಾ ಗೊಂದಲಗಳ ಬಗ್ಗೆ ವಿವರವಾಗಿ ಸಮನ್ವಯಗೊಳಿಸಿ ಪ್ರಕಾಶಿಸಲಾಗಿದೆ. ಈ ಪುಸ್ತಕವು ಓದುಗರಿಗೆ ಕ್ರೋಧದಿಂದ ಮುಕ್ತರಾಗಲು ಹೆಚ್ಚಿನ ಸಹಾಯಕವಾಗಲಿ ಎನ್ನುವುದೇ ನಮ್ಮ ಅಭಿಲಾಷೆ.

-ಡಾ. ನಿರುಮಾ

# ವಿಜ್ಞಾಪನೆ

ಜ್ಞಾನಿ ಪುರಷರಾದ ಪೂಜನೀಯ ದಾದಾ ಭಗವಾನರ ಮುಖೇನ ವ್ಯಕ್ತಪಡಿಸಲಾಗಿರುವ ಆಧ್ಯಾತ್ಮಿಕ ಹಾಗೂ ವ್ಯವಹಾರ ಜ್ಞಾನಕ್ಕೆ ಸಂಬಂಧಪಟ್ಟ ವಿಚಾರಧಾರೆಗಳ ವಾಣಿಯನ್ನು ರೆಕಾರ್ಡಿಂಗ್(ಧ್ವನಿಸುರಳಿಯ) ಮೂಲಕ ಸಂಗ್ರಹಿಸಲಾಗಿತ್ತು. ನಂತರ ಅವೆಲ್ಲವನ್ನು ಕ್ರೋಡಿಕರಿಸಿ ಪುಸ್ತಕಗಳ ರೂಪದಲ್ಲಿ ಪ್ರಕಟಿಸಲಾಗಿದೆ. ದಾದಾಶ್ರೀಯವರ ಮಾತೃ ಭಾಷೆಯು ಗುಜರಾತಿಯಾಗಿರುವುದರಿಂದ ಮೂಲ ಪುಸ್ತಕವು ಗುಜರಾತಿ ಭಾಷೆಯಲ್ಲಿದ್ದು, ನಂತರ ಅದನ್ನು ಕನ್ನಡ ಭಾಷೆಯಲ್ಲಿ ಅನುವಾದಿಸಿ ಪ್ರಕಟಗೊಂಡಿರುವ ಆ ಸರಸ್ವತಿಯ ಅದ್ಭುತ ಸಂಕಲನವು ಇದಾಗಿದೆ. ಇದು ಓದುಗರಿ ಒಂದು ವರದಾನವೇ ಆಗಿದೆ.

ಭಾಷಾಂತರಿಸುವಾಗ ಓದುಗರಿಗೆ ದಾದಾರವರ ವಾಣಿಯನ್ನೇ ಆಲಿಸುತ್ತಿದ್ದೇವೇನೋ ಎನ್ನುವಂತಹ ಅನುಭವವು ಉಂಟಾಗಲೆಂದು ವಿಶೇಷವಾದ ಗಮನವನ್ನು ನೀಡಲಾಗಿದೆ. ಆದರೂ, ಕನ್ನಡಕ್ಕೆ ಅನುವಾದಿಸುವಾಗ ಪದಗಳ ಸೀಮಿತದಿಂದಾಗಿ ವಾಕ್ಯಗಳ ರಚನೆಯಲ್ಲಿ ಲೋಪದೋಷಗಳು ಕಂಡುಬರಬಹುದು. ಆದರೆ, ಓದುಗರು ಪುಸ್ತಕದ ಮೂಲ ಉದ್ದೇಶವನ್ನು ಅರಿತುಕೊಂಡು ಹೆಚ್ಚಿನ ಲಾಭವನ್ನು ಪಡೆಯಬೇಕೆನ್ನುವುದೇ ನಮ್ಮ ಆಶಯವಾಗಿದೆ.

ಪ್ರಸ್ತುತ ಪುಸ್ತಕದಲ್ಲಿ ಕೆಲವೊಂದು ಕಡೆ bracket ಗಳನ್ನು ನಮೂದಿಸಲಾಗಿದೆ. ಅದರೊಳಗಿರುವ ಪದಗಳಾಗಲಿ ಅಥವಾ ವಾಕ್ಯಗಳಾಗಲಿ, ಅವು ಪರಮ ಪೂಜ್ಯ ದಾದಾಶ್ರೀಯವರಿಂದ ಹೇಳಲ್ಪಟ್ಟ ವಾಕ್ಯಗಳಿಗೆ ಹೆಚ್ಚಿನ ಸ್ಪಷ್ಟತೆಯನ್ನು ವ್ಯಕ್ತಪಡಿಸುವದಕ್ಕಾಗಿ ಬರೆಯಲಾಗಿದೆ ಹಾಗೂ ದಾದಾಶ್ರೀಯವರಿಂದಲೇ ಹೇಳಲ್ಪಟ್ಟ ಇಂಗ್ಲಿಷ್ ಪದಗಳನ್ನು ಬದಲಾವಣೆ ಮಾಡದೆ ಹಾಗೆಯೇ ಬರೆಯಲಾಗಿದೆ. ದಾದಾಶ್ರೀಯವರ ವಾಣಿ ಗುಜರಾತಿ ಪದಗಳಲ್ಲಿ ಇರುವುದರಿಂದ ಅದಕ್ಕೆ ಸರಿಯಾದ ಅರ್ಥಕೊಡುವ ಕನ್ನಡದ ಪದಗಳು ಸಿಗದೆ ಇರುವಲ್ಲಿ, ದಾದಾಶ್ರೀಯವರು ಹೇಳಿರುವ ಗುಜರಾತಿ ಪದಗಳನ್ನೇ ಬಳಸಲಾಗಿದೆ.

ಜ್ಞಾನಿ ಪುರುಷರ ವಾಣಿಯನ್ನು ಯಥಾರ್ಥವಾಗಿ ಭಾಷಾಂತರಿಸಲು ಹೆಚ್ಚಿನ ಪ್ರಯತ್ನವನ್ನು ಮಾಡಲಾಗಿದೆ. ಆದರೂ, ದಾದಾಶ್ರೀಯವರ ಆತ್ಮಜ್ಞಾನವನ್ನು ಸಂಪೂರ್ಣವಾಗಿ, ನಿಖರವಾಗಿ ತಿಳಿಯಬೇಕಿದ್ದರೆ, ಅದು ಮೂಲ ಭಾಷೆಯಿಂದಲೇ ಸಾಧ್ಯವಾಗುವಂತಹದ್ದು. ಹಾಗಾಗಿ, ಯಾರಿಗೆಲ್ಲಾ ಈ ಜ್ಞಾನವನ್ನು ಆಳವಾಗಿ ತಿಳಿಯಬೇಕೆನ್ನುವ ಹಂಬಲವಿದೆಯೋ ಅಂಥವರು ಮೂಲ ಗುಜರಾತಿ ಭಾಷೆಯಲ್ಲಿರುವ ಪುಸ್ತಕಗಳ ಮೂಲಕ ತಿಳಿದುಕೊಳ್ಳಬಹುದು.

ಭಾಷಾಂತರಕ್ಕೆ ಸಂಬಂಧಪಟ್ಟಂತೆ ಉಂಟಾಗಿರುವ ತಪ್ಪುಗಳಿಗೆ ತಮ್ಮಿಂದ ಕ್ಷಮೆಯಾಚಿಸುತ್ತೇವೆ.

-ಮಹಾತ್ಮವೃಂದ

# ಕ್ರೋಧ

## 'ನನ್ನ ತಪ್ಪು' ಎಂದು, ಯಾರು ಒಪ್ಪಿಕೊಳ್ಳುತ್ತಾರೆ?

**ಪ್ರಶ್ನಕರ್ತ:** ನಾವು ಸರಿಯಾಗೆಯೇ ಇದ್ದರೂ, ಬೇರೆಯವರು ನಮ್ಮದೇ ತಪ್ಪೆಂದು ಹೇಳುವಾಗ, ನಮ್ಮೊಳಗೆ ಅವರ ಬಗ್ಗೆ ಕ್ರೋಧ ಉತ್ಪನ್ನವಾಗುತ್ತದೆ. ಆಗ ನಾವು ಕ್ರೋಧಗೊಳ್ಳದಂತೆ ಇರಲು ಏನು ಮಾಡಬೇಕು?

**ದಾದಾಶ್ರೀ:** ನೀವು ನಿಜವಾಗಿ ಸರಿಯಾಗಿ ಇರುವುದೇ ಆಗಿದೆಯೇ? 'ನೀವು ಸರಿ' ಎಂದು, ನೀವೇನು ತಿಳಿಯಲಾಗಿದೆ, ಅದು ನಿಜವೇ? ನೀವು ಸರಿಯೆಂದು ನಿಮಗೆ ಹೇಗೆ ಗೊತ್ತಾಗಿದೆ?

**ಪ್ರಶ್ನಕರ್ತ:** ನಮ್ಮೊಳಗಿನ ಆತ್ಮ ನಮಗೆ ತಿಳಿಸುತ್ತದೆಯಲ್ಲವೇ, 'ನಾವು ಸರಿ' ಎಂದು.

**ದಾದಾಶ್ರೀ:** ಅಂದರೆ, ಅಲ್ಲಿ ನಿಮ್ಮ ಬಗ್ಗೆ ನೀವೇ judge, ನೀವೇ lawyer, ನೀವೇ ಆರೋಪಿ. ಹಾಗಿರುವಾಗ, ನೀವೇ ಸರಿಯೆಂದು ನಿಮಗೆ ಕಂಡು ಬರುವುದು ಸಹಜ ಅಲ್ಲವೇ? ಆಗ, ನಿಮ್ಮ ತಪ್ಪು ಇರುವುದೇ ಇಲ್ಲವಲ್ಲಾ? ಅದೇ ರೀತಿ ಮತ್ತೊಬ್ಬರಿಗೂ ಕೂಡಾ 'ನಾನು ಸರಿ' ಎಂದು ಅವರಿಗೂ ಅನ್ನಿಸುತ್ತದೆ. ಇದು ನಿಮಗೆ ಅರ್ಥವಾಗುತ್ತಿದೆಯೇ?

## ಇವೆಲ್ಲವೂ ದೌರ್ಬಲ್ಯಗಳೇ !

**ಪ್ರಶ್ನಕರ್ತ:** ಆದರೆ, ನಾನೇನು ಕೇಳ ಬಯಸುತ್ತೇನೆಂದರೆ, ಅನ್ಯಾಯದ ಬಗ್ಗೆ ವಿರೋಧ ವ್ಯಕ್ತಪಡಿಸುವುದು ಸರಿಯಾಗಿಯೇ ಇದೆಯಲ್ಲವೇ? ಯಾವುದೇ ವಸ್ತುವಿನ ವಿಚಾರದಲ್ಲಿ ನಮ್ಮ ಕಣ್ಣೆದುರೇ ಅನ್ಯಾಯವಾಗುತ್ತಿದ್ದರೆ, ಆಗ ಪ್ರಕೋಪಗೊಳ್ಳುವುದು ಯೋಗ್ಯವಾಗಿದೆಯಲ್ಲವೇ?

**ದಾದಾಶ್ರೀ:** ಕ್ರೋಧಗೊಳ್ಳುವುದಾಗಲಿ, ಸಿಟ್ಟುಗೊಳ್ಳುವುದಾಗಲಿ ಎಲ್ಲವೂ ದೌರ್ಬಲ್ಯಗಳಾಗಿವೆ. ಅವೆಲ್ಲಾ ಕೇವಲ weakness, ಇಡೀ ಜಗತ್ತಿನ ಜನರಲ್ಲಿ ಇರುವುದೇ weakness. ನಿಮಗೆ ಯಾರಾದರೂ ಜೋರುಮಾಡಿದರೆ, ನೀವು ಉಗ್ರಗೊಳ್ಳುತ್ತಿರೋ?

**ಪ್ರಶ್ನಕರ್ತ:** ಹೌದು. ಉಂಟಾಗುತ್ತದೆ.

**ದಾದಾಶ್ರೀ:** ಹಾಗಿದ್ದರೆ, ಅದು ನಿಮ್ಮ ದೌರ್ಬಲ್ಯವೋ ಅಥವಾ ಶೌರ್ಯವೋ?

**ಪ್ರಶ್ನಕರ್ತ:** ಆದರೂ ಕೆಲವೊಂದು ಕಡೆ ಕ್ರೋಧಗೊಳ್ಳಲೇ ಬೇಕಾಗುತ್ತದೆ.

**ದಾದಾಶ್ರೀ:** ಇಲ್ಲ, ಇಲ್ಲ. ಕ್ರೋಧ ತನ್ನಲ್ಲಿರುವ ದೌರ್ಬಲ್ಯ. 'ಕೆಲವೊಂದು ಕಡೆ ಕ್ರೋಧಗೊಳ್ಳಲೇ ಬೇಕಾಗುತ್ತದೆ' ಎಂದು, ಹೇಳುವುದು ಸಂಸಾರಿಗಳ ಮಾತು. ಪ್ರತಿಯೊಬ್ಬರಲ್ಲೂ ಇರುವ ಕ್ರೋಧವು ಯಾರಲ್ಲೂ ಸಂಪೂರ್ಣವಾಗಿ ಹೊರಟು ಹೋಗದೇ ಇರುವುದರಿಂದ, ಕ್ರೋಧವನ್ನು ಕೆಲವೊಂದು ಕಡೆ ತೋರಿಸಲೇ ಬೇಕಾಗುತ್ತದೆಯೆಂದು ಜನರು ಹೇಳುತ್ತಾರೆ.

## ಯಾರಿಗೆ ಮನಸ್ಸು ಕೂಡಾ ಕೆಡುವುದಿಲ್ಲವೋ, ಅಂಥವರು ಬಹಳ ಬಲಶಾಲಿಗಳು!

**ಪ್ರಶ್ನಕರ್ತ:** ಈಗ ಯಾರಾದರೂ ನನಗೆ ಅವಮಾನ ಮಾಡುವಾಗ, ನಾನು ಸುಮ್ಮನಿದ್ದು ಬಿಟ್ಟರೆ, ಅದು ನನ್ನ ದೌರ್ಬಲ್ಯವಲ್ಲವೇ?

**ದಾದಾಶ್ರೀ:** ಅಲ್ಲ. ನಿಜವಾಗಿ, ಅವಮಾನವನ್ನು ಸಹಿಸಿಕೊಳ್ಳುವವರನ್ನು ಮಹಾ ಬಲಶಾಲಿಗಳೆಂದು ಕರೆಯಲ್ಪಡುತ್ತಾರೆ! ಈಗ ನಮಗೆ, ಯಾರೇ ಅವಮಾನ ಮಾಡಿದರೂ ನಮಗೇನು ಕ್ರೋಧ ಉಂಟಾಗುವುದಿಲ್ಲ, ಅವರ ಬಗ್ಗೆ ನಮ್ಮ ಮನಸ್ಸು ಕೂಡಾ ಕೆಡುವುದಿಲ್ಲ. ಅದು ಬಲಶಾಲಿತನ! ದುರ್ಬಲತೆಯಿಂದಾಗಿ ಎಲ್ಲರೂ ಸಿಡುಕುತ್ತಲೇ ಇರುತ್ತಾರೆ. ಪ್ರತಿಯೊಂದು ಜೀವಿ ಕೂಡಾ ದುರ್ಬಲತೆಯಿಂದಾಗಿ ಹೊಡೆದಾಡಿಕೊಂಡೇ ಇರುವುದು. ಹಾಗಾಗಿ, ಅಪಮಾನವನ್ನು ಶಾಂತಿಯಿಂದ ಸಹನೆ ಮಾಡುವವರನ್ನು ಮಹಾ ಬಲಶಾಲಿಗಳೆಂದು ಕರೆಯಲ್ಪಡುತ್ತಾರೆ. ಹಾಗೂ ಒಂದು ಬಗೆಯ ಅಪಮಾನವನ್ನು ಸಹನೆಯಿಂದ ನಿಭಾಯಿಸಿದರೆ ಸಾಕು, ಒಂದೇ ಒಂದು ಬಗೆಯ ಸಹನೆಯಿಂದ ನಿಭಾಯಿಸಿ ಬಿಟ್ಟರೆ, ನಂತರ ನೂರು ಬಗೆಯ ಅಪಮಾನ ಮಾಡಿದರೂ ನಿಭಾಯಿಸುವ ಶಕ್ತಿ ನಿಮ್ಮಲ್ಲಿ ಉತ್ಪನ್ನವಾಗುತ್ತದೆ. ನಿಮಗಿದು ಅರ್ಥವಾಗುತ್ತಿದೆಯೇ? ಬಲಶಾಲಿಯ ಎದುರು ಅನ್ಯ ಜೀವಿಗಳು ಬಲಹೀನರಂತಾಗಿ ಬಿಡುತ್ತವೆ ಹಾಗೂ ಅದು ಜೀವಿಗಳ ಸ್ವಾಭಾವಿಕ ಗುಣವಾಗಿದೆ. ಹಾಗಾಗಿ, ದುರ್ಬಲ ವ್ಯಕ್ತಿಯು ನಮ್ಮನ್ನು ಎಷ್ಟೇ ಕೆರಳಿಸಿದರೂ, ಅವರಿಗೆ ನಾವು ಯಾವುದೇ ಬಗೆಯಿಂದಲೂ ಪ್ರತಿಕ್ರಿಯಿಸದೆ ಇದ್ದಾಗ, ಅದು ನಮ್ಮ ಬಲಶಾಲಿತನವಾಗಿದೆ!

ನಿಜವಾಗಿ ನೋಡಿದರೆ, ದುರ್ಬಲರನ್ನು ನಾವು ರಕ್ಷಣೆ ಮಾಡಬೇಕು ಹಾಗೂ ಬಲಾಢ್ಯರನ್ನು ಎದುರಿಸಬೇಕು. ಆದರೆ, ಈ ಕಲಿಯುಗದಲ್ಲಿ ಅಂತಹ ಮನುಷ್ಯರೇ ಇಲ್ಲವಲ್ಲಾ! ಈಗಂತೂ ದುರ್ಬಲ ಜನರೇ ಹೆಚ್ಚು ಹೊಡೆತಕ್ಕೆ ಒಳಗಾಗುತ್ತಾರೆ ಹಾಗೂ ಬಲಾಢ್ಯರಿಂದ ಜನರು ದೂರ ಓಡುತ್ತಾರೆ. ಎಲ್ಲೋ ಕೆಲವರು ಮಾತ್ರ ದುರ್ಬಲರನ್ನು ರಕ್ಷಿಸಿ ಹಾಗೂ ಬಲಾಢ್ಯರಿಗೆ ಎದುರಾಗಿ ನಿಲ್ಲುತ್ತಾರೆ. ಹಾಗಿದ್ದವರನ್ನು ಮಾತ್ರ ಕ್ಷತ್ರಿಯ ಗುಣವುಳ್ಳವರೆಂದು ಕರೆಯಲ್ಪಡುತ್ತಾರೆ. ಆದರೆ, ಈಗಿನ ಕಾಲದಲ್ಲಿ ದುರ್ಬಲರೇ ಹೆಚ್ಚು ಪೆಟ್ಟು ತಿನ್ನುವುದಾಗಿದೆ. ಮನೆಯಲ್ಲಿ ನೋಡಿದರೆ, ಗಂಡ ಹೆಂಡತಿಗೆ ಹೊಡೆಯುತ್ತಲೇ ಇರುತ್ತಾನೆ. ಗೂಟಕ್ಕೆ ಕಟ್ಟಿದ ಹಸುವನ್ನು ಹೊಡೆಯುತ್ತಲಿದ್ದರೆ, ಆ ಬಡಪಾಯಿ ಹಸು ತಪ್ಪಿಸಿಕೊಂಡು ಹೋಗುವುದಾದರೂ ಹೇಗೆ? ಅದೇ ಕಟ್ಟಲಾಗಿರುವ ಹಗ್ಗವನ್ನು ಬಿಚ್ಚಿ ಹೊಡೆಯಲು ಹೋದಾಗ, ಅದು ಓಡಿಹೋಗುತ್ತದೆ ಅಥವಾ ಎದುರಾಗಿ ನಿಲ್ಲುತ್ತದೆ.

ಯಾವ ಮನುಷ್ಯ, ತನ್ನಲ್ಲಿ ಶಕ್ತಿಯಿದ್ದರೂ ಸಹ ಮತ್ತೊಬ್ಬರಿಗೆ ತೊಂದರೆ ಕೊಡದೆ, ತನ್ನ ಶತ್ರುವಾಗಿದ್ದರೂ ಸಹ ತೊಂದರೆ ಕೊಡದಿರುವಂತಹ ಮನುಷ್ಯರನ್ನು ಬಲಶಾಲಿಗಳೆಂದು ಕರೆಯಲಾಗುತ್ತದೆ. ಈಗ ನಿಮ್ಮ ಮೇಲೆ ಯಾರಾದರು ಕ್ರೋಧಗೊಂಡಾಗ, ನೀವು ಕೂಡಾ ಕ್ರೋಧಗೊಂಡರೆ, ಅದು ನಿಮ್ಮ ಬಲಹೀನತೆಯಾಗಿದೆಯಲ್ಲವೇ? ನಾವು ಹೇಳಲು ಬಯಸುವುದೇನೆಂದರೆ, ಈ ಕ್ರೋಧ-ಮಾನ-ಮಾಯಾ-ಲೋಭ ಇವೆಲ್ಲವೂ ದೌರ್ಬಲ್ಯಗಳೇ ಆಗಿವೆ. ಬಲಶಾಲಿಗೆ ಕ್ರೋಧಗೊಳ್ಳಬೇಕಾದ ಅಗತ್ಯವಾದರೂ ಏನಿದೆ? ಆದರೆ, ಈ ಕ್ರೋಧದ ಪ್ರತಾಪ ಎಷ್ಟಿದೆಯೆಂದರೆ, ಅದರ ಪ್ರತಾಪದಿಂದ ಮತ್ತೊಬ್ಬರನ್ನು ತನ್ನ ವಶಕ್ಕೆ ತೆಗೆದುಕೊಳ್ಳಲಾಗುತ್ತದೆ. ಹಾಗೂ ಯಾರು ತನ್ನೊಳಗೆ ಉಂಟಾಗುವ ಕ್ರೋಧಕ್ಕೆ ಒಳಗಾಗುವುದಿಲ್ಲವೋ, ಅಂಥವರಲ್ಲಿ ಇತರರಿಗಿಂತ ಏನೋ ಹೆಚ್ಚಿನ ಸಾಮರ್ಥ್ಯ ಇರಬೇಕಲ್ಲವೇ? ಅವರಲ್ಲಿ 'ಶೀಲವಂತ' ಸದ್ಗುಣ ಚಾರಿತ್ರ್ಯ ಇರುವುದು. ಹಾಗಾಗಿಯೇ ಅಂಥವರನ್ನು ಕಂಡ ಕೂಡಲೇ ಕ್ರೂರ ಪ್ರಾಣಿಗಳು ಕೂಡಾ ಅವರ ವಶವಾಗಿ ಬಿಡುತ್ತವೆ. ಹುಲಿ-ಸಿಂಹ, ಶತ್ರುಗಳು, ಶತ್ರುಗಳ ಸೈನ್ಯ ಎಲ್ಲರೂ ಅವರ ವಶವಾಗಿ ಬಿಡುತ್ತಾರೆ!

## ಕ್ರೋಧಗೊಳ್ಳುವವ ಅಬಲೆ!

**ಪ್ರಶ್ನಕರ್ತ:** ಆದರೆ ದಾದಾ, ಕೆಲವೊಂದು ಸಮಯದಲ್ಲಿ ಯಾರಾದರು ನಮ್ಮ ಮೇಲೆ ಕ್ರೋಧಗೊಂಡು ಬಿಸಿಯಾದಾಗ ನಾವೇನು ಮಾಡಬೇಕು?

**ದಾದಾಶ್ರೀ:** ಕ್ರೋಧಗೊಂಡಾಗ ಎಲ್ಲರೂ ಕೆಂಡದಂತೆ ಬಿಸಿಯಾಗುವುದೇ ಆಗಿದೆ! ಅದೇನು ಅವರ ಹಿಡಿತದಲ್ಲಿದೆಯೇ? ಒಳಗಿನ machinery (ಯಂತ್ರೋಪಕರಣ) ನಮ್ಮ ನಿಯಂತ್ರಣದಲ್ಲಿ ಇಲ್ಲವಲ್ಲಾ! ಅದಕ್ಕೆ ಹೇಗೆ ಬೇಕೋ ಹಾಗೆ machinery ನಡೆಯುತ್ತಲಿರುತ್ತದೆ. ತನ್ನ ನಿಯಂತ್ರಣದಲ್ಲಿ ಇರುವುದಾಗಿದ್ದರೆ, machinery ಯನ್ನು ತಾನು ಬಿಸಿಯಾಗಲು ಬಿಡುತ್ತಿರಲಿಲ್ಲ ! ಆದರೆ, ತನ್ನೊಳಗಿನ machinery ಅದರಷ್ಟಕ್ಕೆ ಬಿಸಿಯಾಗಿ ಬಿಟ್ಟಾಗ, ತನ್ನ ವರ್ತನೆಯು ಕತ್ತೆಯಂತಾಗಿ ಬಿಡುವುದು. ಮನುಷ್ಯನ ವರ್ತನೆ ಹೊರಟು ಹೋಗಿ ಕತ್ತೆಯ ವರ್ತನೆಯಾಗಿ ಬಿಡುವುದು! ಯಾವ ಮನುಷ್ಯನಿಗೇ ಆಗಲಿ ಹಾಗೆಲ್ಲಾ ವರ್ತಿಸಬೇಕೆಂದೇನು ಇರುವುದಿಲ್ಲ. ಆದರೂ ನಿಯಂತ್ರಣವು ತನ್ನ ಕೈಯಲ್ಲಿ ಇಲ್ಲದಿರುವಾಗ ಯಾರು ತಾನೆ ಏನು ಮಾಡಲು ಸಾಧ್ಯ?

ನಿಜವಾಗಿ ನೋಡಿದರೆ, ಈ ಜಗತ್ತಿನಲ್ಲಿ ಯಾವ ಸಮಯದಲ್ಲೇ ಆಗಲಿ, ಕ್ರೋಧಕ್ಕೆ ಒಳಗಾಗ ಬೇಕಾಗಿರುವಂತಹ ಕಾರಣಗಳೇ ಇರುವುದಿಲ್ಲ. ಈಗ ಯಾರೋ ನಿಮ್ಮ ಮಗನ ಬಗ್ಗೆ, 'ನಿಮ್ಮ ಮಗ ಸರಿಯಿಲ್ಲ.' ಎಂದು ಹೇಳುವಾಗ, ನೀವು ಅವರ ಮೇಲೆ ಕ್ರೋಧಗೊಳ್ಳುವ ಅಗತ್ಯವಿಲ್ಲ. ಅಲ್ಲಿ ನೀವು ಸಮಾಧಾನದಿಂದ ನಿಭಾಯಿಸಬೇಕು. ನಿಮ್ಮಲ್ಲಿ ದುರ್ಬಲತೆ ಇದ್ದಾಗ ಮಾತ್ರ ನೀವು ಕ್ರೋಧಕ್ಕೆ ಒಳಗಾಗುವುದು. ಹಾಗೂ ಈ ಕ್ರೋಧಗೊಳ್ಳುವುದೇನಿದೆ, ಅದು ತನ್ನಲ್ಲಿರುವ ಹೆಚ್ಚಿನ ದುರ್ಬಲತೆಯಾಗಿದೆ. ಅತಿ ಹೆಚ್ಚು ದುರ್ಬಲತೆಯುಳ್ಳವರೇ ಬೇಗ ಕ್ರೋಧಕ್ಕೆ ಒಳಗಾಗುತ್ತಾರೆ. ಹಾಗಾಗಿ ಯಾರು ಮತ್ತೊಬ್ಬರ ಮೇಲೆ ಕ್ರೋಧಗೊಳ್ಳುತ್ತಾರೋ, ಅವರ ಬಗ್ಗೆ ನಮಗೆ ದಯೆ ಉಂಟಾಗಬೇಕು. ಅವರಿಗೆ ಉಂಟಾಗಿರುವ ಕ್ರೋಧ ಅವರ ಹಿಡಿತದಲ್ಲಿ ಎಲ್ಲಿದೆ? ಯಾರಿಗೆ ಅವರ ಸ್ವಭಾವವೇ ಅವರ ನಿಯಂತ್ರಣದಲ್ಲಿ ಇರುವುದಿಲ್ಲವೋ, ಅಂಥವರ ಬಗ್ಗೆ ನಮಗೆ ದಯೆ ಇರಬೇಕು.

ಕ್ರೋಧಗೊಂಡು ಕೆಂಡದಂತೆ ಬಿಸಿಯಾಗುವುದರಿಂದ, ತನಗೇ ಮೊದಲು ಬೆಂಕಿ ಹೊತ್ತಿಕೊಂಡು ಸುಡುವುದರ ಜೊತೆಗೆ ತನ್ನ ಎದುರಿರುವ ಮತ್ತೊಬ್ಬರನ್ನು ಸಹ ಸುಡುತ್ತದೆ. ಹೇಗೆ, ಈ ಬೆಂಕಿಕಡ್ಡಿ ತಾನು ಮೊದಲು ಹೊತ್ತಿಕೊಂಡು ನಂತರ ಬೇರೆಲ್ಲವನ್ನು ಸುಟ್ಟುಹಾಕುತ್ತದೆ. ಕ್ರೋಧವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳಲು ಸಾಧ್ಯವಾಗುವುದೇ ಆಗಿದ್ದರೆ, ಆಗ ಯಾರೂ ಕ್ರೋಧಗೊಳ್ಳಲು ಹೋಗುತ್ತಿರಲಿಲ್ಲ! ಸುಟ್ಟುಕೊಂಡು ನರಳುವುದಕ್ಕೆ ಯಾರು ತಾನೆ ಬಯಸುತ್ತಾರೆ?

ಕೆಲವರು ನನ್ನನ್ನು ಪ್ರಶ್ನಿಸಿರುವುದಿದೆ, 'ಸಂಸಾರ ಜೀವನದಲ್ಲಿ ಕೆಲವೊಮ್ಮೆ ಕ್ರೋಧಗೊಳ್ಳಬೇಕಾದ ಅಗತ್ಯವು ಸಂಭವಿಸುತ್ತದೆ. ಆಗೇನು ಮಾಡಬೇಕು?'ಎಂದು. ಅದಕ್ಕೆ ನಾವು ಹೇಳುವುದೇನೆಂದರೆ, 'ಸಂಸಾರದಲ್ಲಿ ಕ್ರೋಧಗೊಳ್ಳಲೇ ಬೇಕಾಗುವಂತಹ ಅಗತ್ಯವಾದ ಕಾರಣವು ಯಾವುದೂ ಇಲ್ಲ. ಕ್ರೋಧ ಕೇವಲ ಮನುಷ್ಯನ ದುರ್ಬಲತೆ, ದುರ್ಬಲತೆಯಿಂದಾಗಿ ಕ್ರೋಧ ಉಂಟಾಗುವುದು. ಭಗವಾನರು (ತೀರ್ಥಂಕರರು), ಕ್ರೋಧಕ್ಕೆ ಒಳಗಾಗುವವರನ್ನು 'ಅಬಲೆ' ಎಂದು ಕರೆದಿದ್ದಾರೆ. 'ಪುರುಷ'ರೆಂದು ಯಾರನ್ನು ಕರೆಯಲಾಗುವುದು? ಈ ಕ್ರೋಧ-ಮಾನ-ಮಾಯಾ-ಲೋಭ ಇವೆಲ್ಲವುಗಳ ದೌರ್ಬಲ್ಯ ಯಾರಿಗೆ ಇರುವುದಿಲ್ಲವೋ, ಅಂಥವರನ್ನು ಭಗವಾನರು, 'ಪುರುಷ'ನೆಂದು ಕರೆದಿದ್ದಾರೆ. ಆದರೆ, ಈಗ ಜಗತ್ತಿನಲ್ಲಿ ಕಾಣಲು ಸಿಗುವ ಹೆಚ್ಚಿನ ಪುರುಷರು ಅಬಲೆಯರೇ ಆಗಿದ್ದಾರೆ. ಆದರೂ ಯಾರಿಗೂ ಅದರ ಬಗ್ಗೆ ನಾಚಿಕೆಯಿಲ್ಲ. ಅದೂ ಕೂಡಾ ಒಂದು ರೀತಿಯಲ್ಲಿ ಒಳ್ಳೆಯದೆ. ಯಾರಿಗೂ ಏನೊಂದೂ ತಿಳುವಳಿಕೆ ಇಲ್ಲ. ಹಾಗೇನಾದರೂ ತಿಳುವಳಿಕೆ ಇದ್ದಿದ್ದರೆ, ಅವರನ್ನು ಅಬಲೆ ಎಂದು ಕರೆಯುವಾಗ, ಅವರಿಗೆ ಸಹಿಸಲಾಗದಷ್ಟು ನಾಚಿಕೆಯಾಗಬೇಕಿತ್ತು, ಅಲ್ಲವೇ? ಆದರೆ, ಅವರಿಗಿರುವ ತಿಳುವಳಿಕೆ ಎಷ್ಟು? ಸ್ನಾನಕ್ಕೆ ನೀರು ಕೊಟ್ಟರೆ ಸ್ನಾನಮಾಡುತ್ತಾರೆ, ತಿನ್ನಲು ಕೊಟ್ಟರೆ ತಿನ್ನುತ್ತಾರೆ. ಸ್ನಾನಮಾಡುವುದು, ಮಲಗುವುದು ಇವಿಷ್ಟೇ ತಿಳಿದಿರುವುದು. ಅದುಬಿಟ್ಟು, ಮತ್ತೇನೂ ತಿಳುವಳಿಕೆಯೇ ಇಲ್ಲ. ಮನುಷ್ಯತ್ವ ಅಂದರೆ, ಬಹಳ ವಿಶೇಷವಾದ ಅರಿವನ್ನು ಉಳ್ಳವರೆಂದು, ಸಜ್ಜನರೆಂದು ಕರೆಯಲಾಗುವುದು. ಆದರೆ, ಸಜ್ಜನರಂತೆ ವರ್ತಿಸಬೇಕು ಎನ್ನುವಂತಹ ಅರಿವು ಮನುಷ್ಯರಲ್ಲಿ ಇಲ್ಲವಲ್ಲಾ.

ಕ್ರೋಧ-ಮಾನ-ಮಾಯಾ-ಲೋಭ ಬಹಿರಂಗವಾಗಿ ಕಂಡುಬರುವಂತಹ ದೌರ್ಬಲ್ಯಗಳಾಗಿವೆ. ಹಾಗೂ ಹೆಚ್ಚು ಕ್ರೋಧಗೊಂಡಾಗ ಕೈ-ಕಾಲುಗಳು ನಡುಗುವುದನ್ನು ನೀವು ನೋಡಿಲ್ಲವೇ?

**ಪ್ರಶ್ನಕರ್ತ:** ಹೌದು. ಕ್ರೋಧಗೊಳ್ಳುವುದು ಸರಿಯಲ್ಲವೆಂದು ಶರೀರ ಕೂಡಾ ವ್ಯಕ್ತಪಡಿಸುವುದು.

**ದಾದಾಶ್ರೀ:** ಶರೀರ ಕೂಡಾ ಕ್ರೋಧಗೊಳ್ಳಲು ಹೋಗಬೇಡವೆಂದು ತೋರಿಸುವುದು. ಕ್ರೋಧ ನಮಗೆ ಶೋಭಿಸುವುದಿಲ್ಲ. ಹಾಗಾಗಿ, ಕ್ರೋಧ ಮನುಷ್ಯನ ಬಹು ದೊಡ್ಡ ದೌರ್ಬಲ್ಯವೆಂದು ಹೇಳಲಾಗಿದೆ! ಆದ್ದರಿಂದ ನಾವು ಕ್ರೋಧಗೊಳ್ಳಲು ಹೋಗಬಾರದು.

## Personality (ವ್ಯಕ್ತಿತ್ವ) ಪ್ರಭಾವ ಬೀರುವುದು ನಮ್ಮಲ್ಲಿ ದೌರ್ಬಲ್ಯ ಇಲ್ಲದಿದ್ದಾಗ!

**ಪ್ರಶ್ನಕರ್ತ:** ಒಬ್ಬ ವ್ಯಕ್ತಿ ಚಿಕ್ಕ ಮಗುವಿಗೆ ಸಿಕ್ಕಾಪಟ್ಟೆ ಹೊಡೆಯುತ್ತಿರುವುದನ್ನು ಕಂಡಾಗ, ನಾವು ಮಗುವಿಗೆ ಹೊಡೆಯಬೇಡವೆಂದು ಅವನಿಗೆ ಹೇಳಿದರೂ ಅವನು ಹೊಡೆಯುವುದನ್ನು ನಿಲ್ಲಿಸದಿದ್ದಾಗ, ನಾವು ಅವನಿಗೆ ಜೋರುಮಾಡಿ, ಕ್ರೋಧ ವ್ಯಕ್ತಪಡಿಸಿಯಾದರೂ ಹೊಡೆಯುವುದನ್ನು ನಿಲ್ಲಿಸುವಂತೆ ಮಾಡಬೇಕೋ, ಬೇಡವೋ?

**ದಾದಾಶ್ರೀ:** ನೀವು ಕ್ರೋಧವನ್ನು ವ್ಯಕ್ತಪಡಿಸುವುದರಿಂದ ಅವನೇನು ಹೊಡೆಯುವುದನ್ನು ನಿಲ್ಲಿಸುತ್ತಾನೆಯೇ? ಜೊತೆಗೆ ಬಿಡಿಸಲು ಹೋಗಿರುವ ನಿಮಗೂ ಸಹ ಹೊಡೆಯುತ್ತಾನೆ! ಅಲ್ಲಿ ನೀವು ಯಾಕೆ ಅವನ ಮೇಲೆ ಕ್ರೋಧಗೊಳ್ಳಬೇಕು? ನಿಮಗೆ ಹೇಳಬೇಕೆಂದು ಅನ್ನಿಸಿದರೆ ಸಮಾಧಾನದಿಂದ ಹೇಳಿ, ವ್ಯವಹಾರಿಕ ರೀತಿಯಲ್ಲಿ ಮಾತನಾಡಿ. ಅದುಬಿಟ್ಟು ಕ್ರೋಧಗೊಳ್ಳುವುದು ನಿಮ್ಮ weakness ಆಗಿದೆ!

**ಪ್ರಶ್ನಕರ್ತ:** ಹಾಗಾದರೆ, ಆ ಮಗುವನ್ನು ಹೊಡೆಯಲು ಅವನನ್ನು ಬಿಟ್ಟುಬಿಡಬೇಕೇ?

**ದಾದಾಶ್ರೀ:** ಹಾಗಲ್ಲ. ನೀವು ಅವನಿಗೆ ಕೇಳಬಹುದು, 'ಯಾಕೆ ನೀನು ಆ ಮಗುವಿಗೆ ಹೊಡೆಯುತ್ತಿದ್ದೀಯಾ? ಆ ಮಗು ನಿನಗೇನು ತೊಂದರೆಕೊಟ್ಟಿದೆ?' ಎಂದು, ಅವನಿಗೆ ಅರ್ಥವಾಗುವಂತೆ ಅವನೊಂದಿಗೆ ಮಾತನಾಡಬಹುದು. ಅದುಬಿಟ್ಟು, ಅವನ ಮೇಲೆ ಕ್ರೋಧಗೊಳ್ಳುವುದು ನಿಮ್ಮ ದೌರ್ಬಲ್ಯವಾಗಿದೆ. ಮೊಟ್ಟಮೊದಲು, ನಮ್ಮಲ್ಲಿ ದೌರ್ಬಲ್ಯ ಇರಬಾರದು. ಯಾರಲ್ಲಿ ದೌರ್ಬಲ್ಯ ಇರುವುದಿಲ್ಲವೋ, ಅಂಥವರ ವ್ಯಕ್ತಿತ್ವ ಮತ್ತೊಬ್ಬರ ಮೇಲೆ ಪ್ರಭಾವ ಬೀರುವುದೇ ಆಗಿದೆ! ಅಂತಹ ವ್ಯಕ್ತಿಗಳ ಮಾತನ್ನು ಸಹಜವಾಗಿ ಎಲ್ಲರೂ ಒಪ್ಪಿಕೊಂಡು ಬಿಡುತ್ತಾರೆ!

**ಪ್ರಶ್ನಕರ್ತ:** ಒಂದು ವೇಳೆ ಒಪ್ಪಿಕೊಳ್ಳದೆ ಹೋದರೆ?

**ದಾದಾಶ್ರೀ:** ಒಪ್ಪಿಕೊಳ್ಳದಿರಲು ಕಾರಣವೇನು? ನಿಮ್ಮ personality ಪ್ರಭಾವ ಬೀರುವಂತಹದ್ದಾಗಿಲ್ಲ. ಹಾಗಾಗಿ, ನಿಮ್ಮಲ್ಲಿರುವ ದೌರ್ಬಲ್ಯ ಸಂಪೂರ್ಣ ನಾಶವಾಗಬೇಕು ಹಾಗೂ ನೀವು ಚಾರಿತ್ರ್ಯವಂತರಾಗಬೇಕು. Man of Personality ಹೊಂದಬೇಕು! ಲಕ್ಷಾಂತರ ರೌಡಿಗಳು ನಿಮ್ಮನ್ನು ನೋಡುವಾಗಲೇ ಓಡಿ ಹೋಗುವಂತಾಗಬೇಕು! ಸಿಡುಕುವ ವ್ಯಕ್ತಿಗೆ ಹೆದರಿ ಯಾರೂ ಓಡಿಹೋಗುವುದಿಲ್ಲ. ಬದಲಿಗೆ ಅಂಥವನನ್ನು ಜನರು ಹಿಡಿದು ಹೊಡೆಯುತ್ತಾರೆ! ಜಗತ್ತಿನಲ್ಲಿ ಬಲಹೀನರೇ ಹೆಚ್ಚು ಶೋಷಣೆಗೆ ಒಳಗಾಗುತ್ತಾರೆ ಅಲ್ಲವೇ? ಹಾಗಾಗಿ, Man of Personality ಹೊಂದಬೇಕು! Personality ಹೊಂದಲಾಗುವುದು ಯಾವಾಗ? ವಿಜ್ಞಾನವನ್ನು ಅರಿತುಕೊಂಡಾಗ Personality ಹೊಂದಲಾಗುವುದು. ಈ ಜಗತ್ತಿನಲ್ಲಿ ಸ್ವಲ್ಪ ಸಮಯದ ನಂತರ ಮರೆತು ಹೋಗುವಂತಹ ವಿಚಾರವೇನಿದೆ, ಅದು (relative) ಜ್ಞಾನ ಹಾಗೂ ಎಂದಿಗೂ ಮರೆಯದೆ ಇರುವಂತಹದ್ದೇನಿದೆ, ಅದು ವಿಜ್ಞಾನ!

## ಉಷ್ಣಕ್ಕಿಂತಲೂ ಶೀತದ ಪ್ರಭಾವ ಹೆಚ್ಚು!

ಹಿಮಪ್ರದೇಶದಲ್ಲಿ ನೀವು ಎಂದಾದರೂ ನೋಡಲಾಗಿದೆಯೇ? ಅಲ್ಲಿ ಹಿಮದಿಂದಾಗಿ ಎಷ್ಟು ಶೀತಮಯ ವಾತಾವರಣ ಇರುವುದಲ್ಲವೇ? ಆದರೂ ಅಲ್ಲಿರುವ ಮರ ಗಿಡಗಳೆಲ್ಲಾ ಸುಟ್ಟು ಸೊರಗಿ ಹೋಗುತ್ತವೆ. ಎಲ್ಲಾ ಬಗೆಯ ಹತ್ತಿಯ ಗಿಡ, ಹುಲ್ಲು

ಗಿಡಗಳೆಲ್ಲಾ ಕರಕಲಾಗಿ ಬಿಡುತ್ತವೆ. ಅದನ್ನು ನೀವು ನೋಡಿಲ್ಲವೇ? ಅವು ಯಾಕೆ ತಣ್ಣಗಿರುವ ವಾತಾವರಣವಾಗಿದ್ದರೂ ಸಹ ಸುಟ್ಟು ಹೋಗುತ್ತವೆ?

**ಪ್ರಶ್ನಕರ್ತ:** ಮಿತಿಮೀರಿದ (ಓವರ್ ಲಿಮಿಟ್) ಶೀತದ ತಾಪಮಾನದಿಂದಾಗಿ.

**ದಾದಾಶ್ರೀ:** ಹೌದು. ಅದೇ ರೀತಿ, ನೀವು ಕೂಡಾ ತಣ್ಣಗೆ (ಶಾಂತವಾಗಿ) ಇದ್ದುಬಿಟ್ಟಾಗ, 'ಶೀಲವಂತ' ('ಪ್ರಭಾವಶೀಲ') ಗುಣವು ನಿಮ್ಮಲ್ಲಿ ಉತ್ಪನ್ನವಾಗುವುದು.

## ಕ್ರೋಧ ನಾಶವಾದಾಗ, ವ್ಯಕ್ತಗೊಳ್ಳುವುದು ಪ್ರತಾಪ!

**ಪ್ರಶ್ನಕರ್ತ:** ದಾದಾ, ಹೆಚ್ಚು ತಣ್ಣಗೆ (ಶಾಂತವಾಗಿ) ಇರುವುದೂ ಸಹ ಒಂದು ಬಗೆಯ ದೌರ್ಬಲ್ಯವಾಗುವುದಿಲ್ಲವೇ?

**ದಾದಾಶ್ರೀ:** ಹೆಚ್ಚು ತಣ್ಣಗಾಗ ಬೇಕಾದ ಅಗತ್ಯವಿಲ್ಲ. ಒಂದು limit ನಲ್ಲಿ ನಾವು ಇರಬೇಕು. ಅದನ್ನು 'normality' ಎಂದು ಕರೆಯಲಾಗುತ್ತದೆ. Below normal is the fever and above normal is the fever, ninety-eight is the normal. ಹಾಗಾಗಿ, ನಾವು normality ಇಟ್ಟುಕೊಳ್ಳಬೇಕು...

ಕ್ರೋಧ ಮಾಡುವವನಿಗಿಂತ, ಕ್ರೋಧ ಮಾಡದಿರುವವನ ಬಗ್ಗೆ ಜನರು ಹೆಚ್ಚು ಭಯಗೊಂಡು ವರ್ತಿಸುತ್ತಾರೆ. ಅದಕ್ಕೆ ಕಾರಣವೇನು? ಯಾಕೆಂದರೆ, ತನ್ನಲ್ಲಿ ಕ್ರೋಧಗೊಳ್ಳುವುದು ನಿಂತುಹೋದ ಮೇಲೆ ಪ್ರತಾಪ ಉತ್ಪನ್ನವಾಗುವುದು. ಅದು ನಿಸರ್ಗದಲ್ಲಿರುವ ಪ್ರಾಕೃತಿಕ ನಿಯಮವೇ ಹಾಗೆ! ತನ್ನಲ್ಲಿ ಪ್ರತಾಪ ಉತ್ಪನ್ನವಾಗದೇ ಹೋದರೆ, ಶಾಂತ ಸ್ವಭಾವದವರ ರಕ್ಷಣೆಗೆ ಯಾರೂ ಇರುವುದಿಲ್ಲವಲ್ಲಾ! ಮೊದಲಿಗೆಲ್ಲಾ ತನ್ನ ಕ್ರೋಧವೇ ತನಗೆ ರಕ್ಷಣೆ ನೀಡುವುದಾಗಿತ್ತು. ಅಜ್ಞಾನದಲ್ಲಿದ್ದಾಗ ಕ್ರೋಧದಿಂದ ರಕ್ಷಣೆ ಸಿಗುವುದಾಗಿತ್ತು.

## ಸಿಡುಕುವ ವ್ಯಕ್ತಿಗಳಿಗೆ ಯಾವಾಗಲೂ ಕೊನೆಯ ಸ್ಥಾನ!

**ಪ್ರಶ್ನಕರ್ತ:** ಸಭ್ಯ ವ್ಯಕಿಗಳು ಸಿಡಿಮಿಡಿಗೊಂಡರೆ ಅಥವಾ ಕ್ರೋಧಗೊಂಡರೆ ಅದು ಸರಿಯಲ್ಲವೇ?

**ದಾದಾಶ್ರೀ:** ಸಿಡಿಮಿಡಿಗೊಳ್ಳುವ ವ್ಯಕ್ತಿಯನ್ನು ಜನರು ಏನೆಂದು ಕರೆಯುತ್ತಾರೆ? ಮಕ್ಕಳು ಕೂಡಾ ಅಂಥವರನ್ನು ನೋಡಿದಾಗ ಏನೆಂದು ಕರೆಯುತ್ತಾರೆ? 'ಸಿಡುಕಿನ ಮನುಷ್ಯ ಬಂದರು!' ಎಂದು. ಸಿಡಿಮಿಡಿಗೊಳ್ಳುವುದು ಮೂರ್ಖತನವಾಗಿದೆ, foolishness! ಸಿಡುಕುವುದು ಕೂಡಾ ದೌರ್ಬಲ್ಯವಾಗಿದೆ. ಮಕ್ಕಳಿಗೆ, ಅವರ ತಂದೆಯ ಬಗ್ಗೆ, 'ನಿಮ್ಮ ಅಪ್ಪ ಹೇಗೆ?' ಎಂದು ಹೇಳಿದರೆ, ಮಕ್ಕಳು ಹೇಳುತ್ತಾರೆ, 'ಅವರು ತುಂಬಾ ಸಿಡುಕುತ್ತಾರೆ!' ಎಂದು. ಅಲ್ಲಿ ಕೂಡಾ ನೋಡಿ, ಮಕ್ಕಳಿಂದ ತಂದೆಗೆ ಗೌರವ ಹೆಚ್ಚಾಗುವುದೋ ಅಥವಾ ಕಡಿಮೆಯಾಗುವುದೋ? ಅಂತಹದೆಲ್ಲಾ weakness ಮನುಷ್ಯರಲ್ಲಿ ಇರಬಾರದು. ನಿಜವಾಗಿ, ಸಭ್ಯ ವ್ಯಕಿಗಳಲ್ಲಿ weakness ಇರುವುದಿಲ್ಲ.

ಚಿಕ್ಕ ಮಕ್ಕಳಿಗೆ, 'ನಿಮ್ಮ ಮನೆಯಲ್ಲಿ ಯಾರಿಗೆ ಮೊದಲ ಸ್ಥಾನ ಕೊಡಲು ಬಯಸುತ್ತೀರಿ?' ಎಂದು ಕೇಳಿದರೆ, ಆಗ ಮಕ್ಕಳು ವಿಚಾರಮಾಡುತ್ತಾರೆ, ಅಮ್ಮ ಸಿಡುಕುವುದಿಲ್ಲ. ಹಾಗಾಗಿ, ಅಮ್ಮ ಎಲ್ಲರಿಗಿಂತ ಒಳ್ಳೆಯವಳು. ಅಮ್ಮನಿಗೆ ಮೊದಲನೆಯ ನಂಬರ್. ಆಮೇಲೆ ಉಳಿದವರಿಗೆ ಎರಡನೆಯ, ಮೂರನೆಯ ಸ್ಥಾನ ಕೊಡುತ್ತಾ, ಕೊನೆಗೆ ಅಪ್ಪನ ನಂಬರ್ ಬರುವುದು!!! ಯಾಕೆ ಹಾಗೆ? ಯಾಕೆಂದರೆ, ಯಾವಾಗಲೂ ಎಲ್ಲರ ಮೇಲೂ ಅಪ್ಪ ಸಿಡುಕುತ್ತಲೇ ಇರುವುದಾಗಿದೆ. ಮತ್ತೆ ನಾನು ಮಕ್ಕಳಿಗೆ, 'ನಿಮ್ಮ ಅಪ್ಪ ನಿಮಗಾಗಿ ದುಡಿದು ತಂದು, ನಿಮ್ಮ ಖರ್ಚಿಗೆ ಹಣ ಒದಗಿಸುತ್ತಾರೆ. ಆದರೂ, ಅವರಿಗೆ ಕೊನೆಯ ನಂಬರ್ ಕೊಡುತ್ತಿದ್ದೀರಿ?' ಎಂದು ಪ್ರಶ್ನಿಸಿದರೆ, ಮಕ್ಕಳು, 'ಹೌದು.' ಎಂದು ತಲೆಯಾಡಿಸುತ್ತಾರೆ. ನೋಡಿ, ಅಪ್ಪ ಎಷ್ಟೆಲ್ಲಾ ಕಷ್ಟಪಟ್ಟು ದುಡಿದು ಹಣ ಸಂಪಾದಿಸಿ ಮಕ್ಕಳಿಗೆ ತಿನಿಸಿ-ಉಣಿಸಿ, ಅವರ ಖರ್ಚಿಗೆ ಹಣಕೊಟ್ಟರೂ, ಅಪ್ಪನ ಸಿಡುಕಿನ ವರ್ತನೆಯಿಂದಾಗಿ ಸಿಗುವುದು ಕೊನೆಯ ಸ್ಥಾನವೇ ಆಗಿದೆ, ಅಲ್ಲವೇ? ಹಾಗಾಗಿ, ಸಿಡುಕುವವರಿಗೆ ಯಾವಾಗಲೂ ಕೊನೆಯ ಸ್ಥಾನ!

## ಕ್ರೋಧ ಅಂದರೆ, ಕುರುಡುತನ!

**ಪ್ರಶ್ನಕರ್ತ:** ಮನುಷ್ಯನಿಗೆ ಸಾಮಾನ್ಯವಾಗಿ ಕ್ರೋಧ ಉಂಟಾಗಲು ಮುಖ್ಯ ಕಾರಣವು ಏನಾಗಿರಬಹುದು?

**ದಾದಾಶ್ರೀ:** ಅವನಿಗಿರುವ ಕುರುಡುತನ. ಅಜ್ಞಾನದಿಂದಾಗಿ ಕಾಣಿಸುವುದು ನಿಂತುಹೋಗಿರುವುದರಿಂದ! ಮನುಷ್ಯ ಗೋಡೆಗೆ ತಲೆಹೊಡೆದುಕೊಳ್ಳುವುದು ಯಾವಾಗ? ಯಾವಾಗ ಅವನಿಗೆ ಕಣ್ಣು ಕಾಣುವುದಿಲ್ಲವೋ. ಆಗ ಗೋಡೆಗೆ ಹೊಡೆದುಕೊಳ್ಳುತ್ತಾನಲ್ಲವೇ? ಅದೇ ರೀತಿ, ಅಜ್ಞಾನದ ಅಂಧಕಾರದಿಂದಾಗಿ ಕಾಣಿಸುವುದು ನಿಂತುಹೋದಾಗ, ಮನುಷ್ಯನಿಂದ ಕ್ರೋಧ ಉಂಟಾಗುವುದು. ಮುಂದಿನ ದಾರಿ ಮನುಷ್ಯನಿಗೆ ಕಾಣಿಸದೇ ಹೋದಾಗ ಕ್ರೋಧ ಉಂಟಾಗುವುದು.

## ಸೂಜ್ (ಅರಿವು) ಇಲ್ಲದಿದ್ದಾಗ ಕ್ರೋಧ ಉಂಟಾಗುವುದು!

ಕ್ರೋಧ ಯಾವಾಗ ಉಂಟಾಗುವುದು? ಯಾವಾಗ ದರ್ಶನ (ದೃಷ್ಟಿಗೆ) ಅಡ್ಡಿ ಉಂಟಾಗುವುದೋ ಆಗ, ಜ್ಞಾನದ ಮೇಲೂ ಅಡ್ಡಿ ಉಂಟಾಗುವುದು. ಅದರಿಂದಾಗಿ ಕ್ರೋಧ ಉತ್ಪನ್ನವಾಗು ವುದು. ಅದೇ ರೀತಿ ಮಾನದ ವಿಚಾರದಲ್ಲೂ ಕೂಡಾ, ಈ 'ಮಾನ' ಎಂಬ ಕಷಾಯವು ಉತ್ಪನ್ನವಾಗಲು ಕಾರಣ, ದರ್ಶನ (ದೃಷ್ಟಿಗೆ) ಅಡ್ಡಿ ಉಂಟಾದಾಗ ಜ್ಞಾನದ ಮೇಲೂ ಅಡ್ಡಿ ಉಂಟಾಗಿ, 'ಮಾನ' ಎಂಬ ಕಷಾಯವು ಉತ್ಪನ್ನವಾಗುವುದು.

**ಪ್ರಶ್ನಕರ್ತ:** ಉದಾಹರಣೆಯೊಂದಿಗೆ ತಿಳಿಸಿಕೊಟ್ಟರೆ, ಅರ್ಥಮಾಡಿಕೊಳ್ಳಲು ಹೆಚ್ಚು ಸುಲಭವಾಗುತ್ತದೆ.

**ದಾದಾಶ್ರೀ:** ಈಗ, ಒಬ್ಬ ವ್ಯಕ್ತಿ ಕ್ರೋಧಗೊಂಡಿರುವಾಗ, ಅವನನ್ನು ನೋಡಿ ಜನರು ಕೇಳುತ್ತಾರೆ, 'ಏನು ನೀನು ಬಹಳ ಸಿಟ್ಟು ಮಾಡುತ್ತಿರುವೆ?' ಎಂದಾಗ, ಅವನು ಹೇಳುತ್ತಾನೆ, 'ನನಗೇನು ಮಾಡಬೇಕೆಂದು ತಿಳಿಯುತ್ತಿಲ್ಲ. ಏನೂ ಗೋಚರಿಸುತ್ತಿಲ್ಲ. ಹಾಗಾಗಿ, ನನಗೆ ಸಿಟ್ಟು ಬಂದು ಬಿಡುತ್ತದೆ.' ಎನ್ನುತ್ತಾನೆ. ಮನುಷ್ಯನಿಗೆ ಏನೊಂದೂ ಅರಿವಿಗೆ ಬಾರದೇ ಇದ್ದಾಗ, ಮನುಷ್ಯ ಸಿಟ್ಟಿಗೆ ಒಳಗಾಗುತ್ತಾನೆ. ಸರಿಯಾದ ತಿಳುವಳಿಕೆ ಇದ್ದರೆ, ಆಗ ಸಿಟ್ಟಿಗೆ ಒಳಗಾಗಬೇಕಾಗಿದೆಯೇ? ಹಾಗೂ ಸಿಟ್ಟು ಮಾಡಿಕೊಂಡರೆ, ಆ ಸಿಟ್ಟು ಮೊಟ್ಟ ಮೊದಲು ಯಾರಿಗೆ ಬಹುಮಾನ ಕೊಡುತ್ತದೆ? ತನ್ನ ಬಳಿಯಲ್ಲೇ ಬೆಂಕಿ ಹೊತ್ತಿಕೊಂಡರೆ, ಅದು ಮೊದಲಿಗೆ ತನ್ನನ್ನೇ ಸುಡುವುದು. ನಂತರ ಮತ್ತೊಬ್ಬರನ್ನು ಸುಡುವುದು.

## ಕ್ರೋಧಾಗ್ನಿಯು ಸುಟ್ಟುಹಾಕುತ್ತದೆ ತನ್ನನ್ನು ಹಾಗೂ ಪರರನ್ನು!

ಕ್ರೋಧ ಅಂದರೇನು, ಸ್ವತಃ ತನ್ನ ಮನೆಗೆ ತಾನೇ ಬೆಂಕಿ ಹಚ್ಚಿಕೊಂಡಂತೆ. ತನ್ನ ಮನೆಯ ಹುಲ್ಲಿನ ಬಣವೆಗೆ ತಾನೇ ಬೆಂಕಿ ಹಚ್ಚಿಕೊಂಡ ಹಾಗೆ. ಅದನ್ನೇ ಕ್ರೋಧವೆಂದು ಕರೆಯುವುದು. ಕ್ರೋಧವು ಮೊದಲು ತನ್ನನ್ನು ಹಾಗೂ ತನ್ನದೆಲ್ಲವನ್ನೂ ಸುಟ್ಟುಹಾಕುತ್ತದೆ ನಂತರ ಅಕ್ಕಪಕ್ಕದವರನ್ನೂ ಸುಟ್ಟುಹಾಕುತ್ತದೆ.

ದೊಡ್ಡ, ದೊಡ್ಡ ಒಣ ಹುಲ್ಲಿನ ಬಣವೆಗಳನ್ನು ಗದ್ದೆಯ ಬಳಿಯಲ್ಲಿ ಒಟ್ಟುಗೂಡಿಸಿ ಇಟ್ಟಿರುವುದರ ಮೇಲೆ ಒಂದೇ ಒಂದು ಬೆಂಕಿಯ ಕಿಡಿ ತಾಗಿಸಿದ ಕೂಡಲೇ ಏನಾಗುವುದು?

**ಪ್ರಶ್ನಕರ್ತ:** ಎಲ್ಲವೂ ಸುಟ್ಟು ಬೂದಿಯಾಗುವುದು.

**ದಾದಾಶ್ರೀ:** ಅದೇ ರೀತಿ, ಒಂದೇ ಒಂದು ಬಗೆಯ ಕ್ರೋಧ ಉಂಟಾದರೂ ತನ್ನಿಂದ ಗಳಿಸಲಾಗಿದ್ದ ತಿಳುವಳಿಕೆಯನ್ನೆಲ್ಲಾ ನಾಶಮಾಡಿಬಿಡುತ್ತದೆ. ಕ್ರೋಧ ಅಂದರೆ ಪ್ರಕಟಗೊಂಡ ಅಗ್ನಿಯಂತೆ. ತನಗೆ ಗೊತ್ತೇ ಆಗುವುದಿಲ್ಲ, ಕ್ರೋಧದಿಂದಾಗಿ ತನ್ನನ್ನು ತಾನು ಸಂಪೂರ್ಣವಾಗಿ ನಾಶಮಾಡಿಕೊಳ್ಳಲಾಗಿದೆ ಎಂದು. ಯಾಕೆಂದರೆ, ತನಗೆ ಹೊರನೋಟದ ವ್ಯವಹಾರದಲ್ಲಿ ಏನೊಂದೂ ಕಡಿಮೆಯಾಗಿರುವುದಿಲ್ಲ. ಆದರೆ, ತನ್ನೊಳಗೆ ಸರ್ವಸ್ವವನ್ನು ತಾನು ನಾಶಮಾಡಿಕೊಳ್ಳಲಾಗುವುದು. ಅಲ್ಲೇನಾದರೂ ತನಗೆ ಮುಂದಿನ ಜನ್ಮದಲ್ಲಿ ಹೋಗಬೇಕು ಎಲ್ಲಿಗೆ?! ಎನ್ನುವಂತಹ ಅರಿವು ಏನಾದರೂ ಉಂಟಾಗಿದ್ದರೆ, ಆಗ ಗಳಿಸಿಕೊಳ್ಳಲಾಗಿರುವ ಪುಣ್ಯವನ್ನು ಹೆಚ್ಚು ವ್ಯಯ ಮಾಡಲು ಹೋಗುವುದಿಲ್ಲ. ಹೆಚ್ಚು ವ್ಯಯ ಮಾಡಿದರೆ ಏನಾಗುತ್ತದೆ? ಈಗೇನು ಮನುಷ್ಯ ಜನ್ಮ ಸಿಕ್ಕಿದೆಯೋ, ಅದನ್ನು ಕಳೆದುಕೊಂಡು ಪ್ರಾಣಿ ಜನ್ಮ ಪಡೆಯಬೇಕಾಗುವುದು. ಅದೇನು ಒಳ್ಳೆಯದೇ?

ಮತ್ತೊಂದು ವಿಚಾರವೇನೆಂದರೆ, ಜಗತ್ತಿನಲ್ಲಿ ಯಾವ ಮನುಷ್ಯನೇ ಆಗಲಿ ಕ್ರೋಧವನ್ನು ಜಯಿಸಲು ಸಾಧ್ಯವಿಲ್ಲ. ಕ್ರೋಧದಲ್ಲಿ ಎರಡು ವಿಧ. ಒಂದು ಹೊರಗೆ ಕಂಡು ಬರುವ ಕ್ರೋಧ ಹಾಗೂ ಮತ್ತೊಂದು ತನ್ನೊಳಗೆಯೇ ತಳಮಳಿಸುವ ಕ್ರೋಧ. ಯಾರು ಕ್ರೋಧವನ್ನು ಗೆದ್ದಿದ್ದೇವೆ ಎಂದು ಹೇಳುತ್ತಾರೋ, ಅವರು ಕೇವಲ ಹೊರಗೆ ಕಂಡು

ಬರುವ ಕ್ರೋಧವನ್ನು ತಡೆಯುವಲ್ಲಿ ಗೆಲುವನ್ನು ಸಾಧಿಸಲಾಗಿದೆ. ಅಜ್ಞಾನದಲ್ಲಿದ್ದಾಗ ಏನಾಗುವುದೆಂದರೆ, ಒಂದನ್ನು ತಡೆದು ಕಡಿಮೆ ಮಾಡಲು ಹೋದರೆ ಮತ್ತೊಂದು ಹೆಚ್ಚಾಗುವುದು. 'ನಾನು ಕ್ರೋಧವನ್ನು ಗೆದ್ದುಬಿಟ್ಟೆ.' ಎಂದು ಹೇಳಿಕೊಳ್ಳುವಾಗ ತನ್ನಲ್ಲಿ 'ಮಾನ' ಎಂಬ ಕಷಾಯವು ಹೆಚ್ಚಾಗುವುದು. ನಿಜವಾಗಲೂ ಕ್ರೋಧವನ್ನು ಸಂಪೂರ್ಣವಾಗಿ ಗೆಲ್ಲಲು ಯಾರಿಂದಲೂ ಸಾಧ್ಯವಿಲ್ಲ. ಅದೇನಿದ್ದರೂ, ಇತರರಿಗೆ ಕಂಡು ಬರುವಂತಹ, ಹೊರನೋಟದ ತನ್ನ ಕ್ರೋಧವನ್ನು ಮಾತ್ರ ಗೆಲ್ಲಲು ತನ್ನಿಂದ ಸಾಧ್ಯವಾಗಿದೆ ಎಂದು ಹೇಳಬಹುದು.

## ‘ತಾಂತೋ’ (ಕ್ರೋಧವನ್ನು ಮುಂದುವರಿಸಿಕೊಂಡು ಹೋಗುವುದು) ಏನಿದೆ, ಅದು ಕ್ರೋಧ!

ತನ್ನಿಂದ ಮಾಡಲಾದ ಕ್ರೋಧವನ್ನು ಅಲ್ಲಿಗೇ ಬಿಡದೆ ಮುಂದುವರಿಸಿಕೊಂಡು ಹೋದಾಗ ಮಾತ್ರ ಅದನ್ನು ಕ್ರೋಧವೆಂದು ಕರೆಯಲಾಗುವುದು. ಅಂತಹ ವರ್ತನೆಯನ್ನು ಗುಜರಾತಿ ಭಾಷೆಯಲ್ಲಿ ‘ತಾಂತೋ’ ಎಂದು ಕರೆಯಲಾಗುವುದು. ಉದಾಹರಣೆಗೆ: ಮನೆಯಲ್ಲಿ ಗಂಡ-ಹೆಂಡತಿ ಬಹಳಷ್ಟು ಜಗಳವಾಡಿಕೊಂಡು, ಹೆಚ್ಚು ಕೋಪಿಸಿಕೊಂಡು, ಇಡೀ ರಾತ್ರಿ ಇಬ್ಬರೂ ನಿದ್ರೆ ಹಾಳುಮಾಡಿಕೊಂಡು, ನಂತರ ಬೆಳಿಗ್ಗೆ ಹೆಂಡತಿ ಗಂಡನಿಗೆ ಚಹಾದ ಲೋಟ ತಂದು ಅವನ ಎದುರು ಮೇಜಿನ ಮೇಲೆ ಕುಕ್ಕಿ ಹೋಗುವಾಗ, ಗಂಡನಿಗೆ ತಿಳಿಯುವುದು, 'ಹಿಂದಿನ ರಾತ್ರಿಯ ಕೋಪ ಇನ್ನೂ ಅವಳೊಳಗೆ ಮುಂದುವರೆದಿದೆ!' ಎಂದು. ಹೀಗೆ ಕೆಲವರು ಮುಂದುವರಿಸಿಕೊಂಡು ಹೋಗುವಂತಹ ಕ್ರೋಧವನ್ನು ಜೀವನವಿಡೀ ಇಟ್ಟುಕೊಂಡಿರುತ್ತಾರೆ! ಅಪ್ಪ-ಮಕ್ಕಳ ನಡುವೆಯೂ ಹೀಗೆಯೇ! ಕ್ರೋಧವನ್ನು ಬೆಳೆಸಿಕೊಂಡು ಅಪ್ಪ ಮಗನ ಮುಖ ನೋಡುವುದಿಲ್ಲ, ಮಗ ಅಪ್ಪನ ಮುಖ ನೋಡಲು ಇಷ್ಟಪಡುವುದಿಲ್ಲ! ಯಾರಿಗೆ ಕ್ರೋಧ ಒಳಗೆ ಉಳಿದುಕೊಂಡಿರುವುದೋ, ಅಂಥವರ ಮುಖದಿಂದಲೇ ತಿಳಿದುಬರುವುದು.

ಒಳಗಿನ ಕ್ರೋಧ (‘ತಾಂತೋ’) ಹೇಗೆಂದರೆ, ಅದು ಹದಿನೈದು ವರ್ಷಗಳ ಹಿಂದೆ ಯಾರೋ ತನಗೆ ಅಪಮಾನ ಮಾಡಲಾಗಿದ್ದರೆ, ಮತ್ತೆ ಅವರು ಎದುರಿಗೆ ಸಿಕ್ಕಿದ ಕೂಡಲೇ ಹಿಂದಿನದೆಲ್ಲವೂ ತನ್ನ ನೆನಪಿಗೆ ಬಂದುಬಿಡುವುದು. ಸಾದಾರಣವಾಗಿ ಒಳಗಿನ

ಕ್ರೋಧ ಯಾರಿಗೂ ಹೊರಟು ಹೋಗುವುದಿಲ್ಲ. ದೊಡ್ಡ, ದೊಡ್ಡ ಸಾಧು, ಗುರುಗಳಿಗೆ ಕೂಡಾ ಅಪಮಾನ ಉಂಟಾಗಿದ್ದರೆ, ಅವರಲ್ಲೂ ಸಹ ಇಂತಹ ಒಳಗಿನ ಕ್ರೋಧ ಉಳಿದುಬಿಡುತ್ತದೆ. ನಿಮಗೆ ಯಾರಾದರು ರೇಗಿಸಿದಾಗ ನೀವು ಅವರೊಂದಿಗೆ ಹತ್ತು-ಹದಿನೈದು ದಿನಗಳ ಕಾಲ ಮಾತನಾಡುವುದನ್ನೇ ನಿಲ್ಲಿಸಿಬಿಡಲಾಗುತ್ತದೆ. ಅವರ ಮೇಲಿನ ಕ್ರೋಧವನ್ನು ನೀವು ಮುಂದುವರಿಸಿಕೊಂಡು ಹೋಗುವುದೇನಿದೆ, ಅದೇ 'ತಾಂತೋ'!

## ಕ್ರೋಧ ಹಾಗೂ ಸಿಟ್ಟಿನ ನಡುವೆ ಇರುವ ವ್ಯತ್ಯಾಸ!

**ಪ್ರಶ್ನಕರ್ತ:** ದಾದಾ, ಸಿಟ್ಟು ಹಾಗೂ ಕ್ರೋಧದಲ್ಲಿ ಇರುವ ವ್ಯತ್ಯಾಸವೇನು?

**ದಾದಾಶ್ರೀ:** ಕ್ರೋಧ ಅನ್ನುವುದು ಅಂಹಂಕಾರ ಸಹಿತವಾಗಿರುತ್ತದೆ. ಹಾಗೂ ಯಾವುದು ಅಹಂಕಾರ ರಹಿತವಾಗಿದೆ, ಅದು ಸಿಟ್ಟು. ಯಾವಾಗ ಸಿಟ್ಟಿನ ಜೊತೆಗೆ ಅಹಂಕಾರ ಸೇರಿಕೊಳ್ಳುತ್ತದೆ, ಆಗ ಅದನ್ನು ಕ್ರೋಧವೆಂದು ಕರೆಯಲಾಗುತ್ತದೆ. ಅಪ್ಪ ಮಕ್ಕಳ ಮೇಲೆ ತೋರಿಸುವ ಸಿಟ್ಟನ್ನು ಕ್ರೋಧವೆಂದು ಪರಿಗಣಿಸಲು ಬರುವುದಿಲ್ಲ. ಯಾಕೆಂದರೆ, ಅಲ್ಲಿ ಅಪ್ಪನಿಗೆ ಉಂಟಾಗಿರುವ ಕ್ರೋಧವು ಅಹಂಕಾರ ಸಹಿತವಾಗಿ ಇರುವುದಿಲ್ಲ. ಅವರು ಕೇವಲ ಪೋಷಕರಾಗಿ ಮಕ್ಕಳ ಮೇಲೆ ಸಿಟ್ಟು ತೋರ್ಪಡಿಸುತ್ತಾರೆ ಅಷ್ಟೇ. ಹಾಗಾಗಿ, ಭಗವಾನರು (ತೀರ್ಥಂಕರರು) ಹೇಳಿರುವುದಾಗಿದೆ, 'ಅಪ್ಪ ಮಕ್ಕಳ ಮೇಲೆ ಸಿಟ್ಟು ಮಾಡಿದರೂ ಅಪ್ಪ ಪುಣ್ಯ ಕಟ್ಟಿಕೊಳ್ಳುವನು.' ಆಗ ಮತ್ತೆ ಪ್ರಶ್ನಿಸಿ, 'ಅಪ್ಪ ಸಿಟ್ಟು ಮಾಡಿದರೂ ಪುಣ್ಯ ಸಿಗುವುದು ಹೇಗೆ?!' ಎಂದು ಕೇಳಿದಾಗ, ಭಗವಾನರ ಉತ್ತರ, 'ಕ್ರೋಧ ಮಾಡಿದರೆ ಪಾಪವಾಗಿದೆ, ಸಿಟ್ಟು ಮಾಡಿದರೆ ಪಾಪವಲ್ಲ.' ಎಂದು. ನಿಜವಾಗಿ ಕ್ರೋಧ ಅನ್ನುವುದು ಅಹಂಕಾರ ಸಹಿತವಾಗಿದೆ. ಆದರೆ, ಮಕ್ಕಳ ಮೇಲೆ ಸಿಟ್ಟು ಬಂದಾಗ, ಹಾಗೆಲ್ಲಾ ಮಕ್ಕಳ ಮೇಲೆ ಸಿಟ್ಟು ಮಾಡುವುದು ಸರಿಯಲ್ಲವೆಂದು ನಿಮಗೂ ತಿಳಿದು ಬರುವುದಲ್ಲವೇ?

ಈ ಕ್ರೋಧ-ಮಾನ-ಮಾಯಾ-ಲೋಭ, ಇವುಗಳು ಎರಡು ರೀತಿಯಲ್ಲಿ ಇರುತ್ತವೆ.

ಒಂದು ರೀತಿಯ ಕ್ರೋಧವನ್ನು ತಾನು ಹೊರಗೆ ವ್ಯಕ್ತಗೊಳಿಸದಂತೆ ತನ್ನೊಳಗೆ ತಿರುಗಿಸಿಕೊಂಡು ಬಿಡಬಹುದು, ಅಂದರೆ, ವ್ಯಕ್ತಗೊಳ್ಳುವಂತಹ ಕ್ರೋಧವನ್ನು ಹೊರಗೆ ತೋರ್ಪಡಿಸದೆ ನಿವಾರಿಸಿಕೊಂಡು ಬಿಡುವುದು. ಯಾರ ಮೇಲಾದರೂ ಕ್ರೋಧ ಉಂಟಾಗುವಂತಹ ಸಂದರ್ಭದಲ್ಲಿ ತಾನು ಕ್ರೋಧವನ್ನು ತನ್ನೊಳಗೆಯೇ ಕ್ರೋಧಗೊಳ್ಳುವುದು ತಪ್ಪೆಂದು ಬದಲಿಸಿಕೊಂಡಾಗ ಸಂಸಾರದ ವ್ಯವಹಾರವು ಬಹಳ ಸುಂದರಗೊಳ್ಳುವುದು!

ಮತ್ತೊಂದು ಬಗೆಯ ಕ್ರೋಧವನ್ನು ತೋರ್ಪಡಿಸದೆ ತಪ್ಪಿಸಲು ಸಾಧ್ಯವಾಗದಿರುವಂತಹ ಅನಿವಾರ್ಯ ರೀತಿಯ ಕ್ರೋಧ. ತಪ್ಪಿಸಲು ಎಷ್ಟೇ ಪ್ರಯತ್ನಿಸಿದರೂ ಸ್ಫೋಟಗೊಳ್ಳದೆ ಬಿಡುವುದಿಲ್ಲ! ಅದು ತಪ್ಪಿಸಲಾಗದ ಅನಿವಾರ್ಯ ರೀತಿಯ ಕ್ರೋಧ. ಅಂತಹ ಕ್ರೋಧವು ಸ್ವತಃ ತನಗೂ ಅಹಿತವನ್ನು ಮಾಡುವುದಲ್ಲದೆ ಮತ್ತೊಬ್ಬರಿಗೂ ಸಹ ಅಹಿತವನ್ನು ಉಂಟುಮಾಡುತ್ತದೆ!

ತೀರ್ಥಂಕರ ಭಗವಾನರು ಎಲ್ಲಿಯವರೆಗೆ ಕ್ರೋಧಗೊಳ್ಳುವುದನ್ನು ಒಪ್ಪಿಕೊಂಡಿದ್ದಾರೆಂದರೆ, ಈ ಸಾಧು, ಸಂತರು ತೋರ್ಪಡಿಸುವ ಕ್ರೋಧವೇನಿದೆ, ಅದು ಮತ್ತೊಬ್ಬರಿಗೆ ನೋವಿಸುವಂತಹದ್ದಲ್ಲ. ಅಂತಹ ಕ್ರೋಧವನ್ನು ಭಗವಾನರು ಆಕ್ಷೇಪಿಸಿಲ್ಲ. ತನ್ನ ಕ್ರೋಧವು ಕೇವಲ ತನಗೆ ಮಾತ್ರ ದುಃಖ ನೀಡುವುದಾಗಿದ್ದು, ಮತ್ತೊಬ್ಬರಿಗೆ ದುಃಖ ಉಂಟಾಗದ ರೀತಿಯ ಕ್ರೋಧವಾಗಿದ್ದರೆ, ಅಂತಹ ಕ್ರೋಧವನ್ನು ಭಗವಾನರು ಒಪ್ಪಿಕೊಂಡಿದ್ದಾರೆ.

## ತಿಳಿಯುತ್ತಿರುವುದು ಯಾರಿಗೆ? ಎನ್ನುವುದನ್ನು ಕಂಡುಕೊಳ್ಳಬೇಕು!

**ಪ್ರಶ್ನಕರ್ತ:** ನಮಗೆ, 'ಕ್ರೋಧಗೊಳ್ಳಬಾರದು, ಕ್ರೋಧಗೊಳ್ಳುವುದು ತಪ್ಪು.' ಎಂದು, ಎಲ್ಲಾ ತಿಳಿದಿದೆ. ಆದರೂ ಸಹ ಮತ್ತೆ, ಮತ್ತೆ...

**ದಾದಾಶ್ರೀ:** ನಿಜವಾಗಿ, ಕ್ರೋಧಿಗೆ ಕ್ರೋಧಗೊಂಡಿರುವುದು ಅವನಿಗೆ ತಿಳಿದು ಬರುವುದಿಲ್ಲ. ಲೋಭಿಗೆ ಲೋಭದಲ್ಲಿ ಮುಳುಗಿರುವುದು ತಿಳಿದು ಬರುವುದಿಲ್ಲ. ಮಾನ ತುಂಬಿಕೊಂಡಿರುವವನಿಗೆ ಮಾನದಲ್ಲಿ ಮುಳುಗಿರುವುದು ತಿಳಿದು ಬರುವುದಿಲ್ಲ. ಆದರೆ,

'ಅವೆಲ್ಲಾ ತನ್ನೊಳಗೆ ಉಂಟಾಗುತ್ತಿವೆ.' ಎಂದು, ತಿಳಿಯುತ್ತಿರುವವ 'ತಾನು' ಬೇರೆ! ಎಲ್ಲರ ಮನಸ್ಸಿಗೆ ಅನ್ನಿಸುತ್ತದೆ, 'ಕ್ರೋಧ ಉಂಟಾಗಿದೆ. ಯಾಕೆ ಹೀಗೆ ಮತ್ತೆ, ಮತ್ತೆ ಉಂಟಾಗುತ್ತಲೇ ಇರುತ್ತದೆ?' ಎಂದು. ಆದರೆ, ಅಲ್ಲಿ, 'ತಿಳಿಯುತ್ತಿದೆ' ಯಾರಿಗೆ? ಎನ್ನುವುದು ಜನರಿಗೆ ಗೊತ್ತಿಲ್ಲ. 'ಯಾರಿಗೆ ತಿಳಿಯುತ್ತಿದೆ?' ಎನ್ನುವುದನ್ನು ಮಾತ್ರ ನಾವು ಕಂಡುಕೊಳ್ಳುವ ಪ್ರಯತ್ನ ಮಾಡಬೇಕಾಗಿದೆ. 'ತಿಳಿಯಲಾಗುತ್ತಿದೆ ಯಾರಿಂದ?' ಎನ್ನುವುದನ್ನು ಕಂಡುಕೊಂಡ ಕೂಡಲೇ ತನ್ನೊಳಗಿರುವ ಕ್ರೋಧ-ಮಾನ-ಮಾಯಾ-ಲೋಭ ಎಲ್ಲವೂ ಹೊರಟು ಹೋಗುತ್ತವೆ. ನಂತರ ಮುಂದೆಂದಿಗೂ ಅವುಗಳು ಉದ್ಭವಿಸುವುದೇ ಇಲ್ಲ.

## ಒಮ್ಮೆ, ಸಮ್ಯಕ್ (ಆತ್ಮಜ್ಞಾನದ) ಉಪಾಯದಿಂದ ತಿಳಿದುಕೊಳ್ಳಬೇಕು!

**ಪ್ರಶ್ನಕರ್ತ:** ತಿಳಿಯಲಾಗಿದ್ದರೂ ಸಹ ಮತ್ತೆ, ಮತ್ತೆ ಕ್ರೋಧ ಉಂಟಾಗಿ ಬಿಡುತ್ತದೆ. ಅದನ್ನು ಹೋಗಲಾಡಿಸುವುದು ಹೇಗೆ?

**ದಾದಾಶ್ರೀ:** ಯಾರಿಂದ ಅದನ್ನು ತಿಳಿಯಲಾಗಿದೆ? ಎನ್ನುವುದನ್ನು ಸರಿಯಾಗಿ ಕಂಡುಕೊಂಡ ಮೇಲೆ ಕ್ರೋಧ ಉಂಟಾಗುವುದೇ ಇಲ್ಲ. ಕ್ರೋಧ ಉಂಟಾಗುತ್ತಲೇ ಇದೆ ಎಂದಾದರೆ, ನೀವು ಸರಿಯಾಗಿ ತಿಳಿದುಕೊಂಡಿಲ್ಲವೆಂದಾಯಿತು. ಕೇವಲ 'ನನಗೆ ತಿಳಿಯುತ್ತದೆ.' ಎಂದು ಅಹಂಕಾರ ಪಡುವುದಾಗಿದೆ.

**ಪ್ರಶ್ನಕರ್ತ:** ಕ್ರೋಧ ಉಂಟಾದ ಮೇಲೆ ಅರಿವಾಗುತ್ತದೆ, 'ನಾನು ಕ್ರೋಧಗೊಳ್ಳಬಾರದಿತ್ತು.' ಎಂದು.

**ದಾದಾಶ್ರೀ:** ಹಾಗಲ್ಲ. ಯಾವುದೇ ವಿಚಾರದಲ್ಲಾಗಲಿ, ನೀವು ಸರಿಯಾಗಿ ತಿಳಿದುಕೊಂಡ ಮೇಲೆ ನಿಮಗೆ ಕ್ರೋಧ ಉಂಟಾಗುವುದೇ ಇಲ್ಲ. ಉದಾಹರಣೆಗೆ: ಇಲ್ಲಿ ಎರಡು ಸೀಸೆಗಳಿವೆ. ಒಂದು ಸೀಸೆಯಲ್ಲಿ ಔಷಧಿ ಮತ್ತೊಂದು ಸೀಸೆಯಲ್ಲಿ ವಿಷದ ದ್ರವ್ಯವಿದೆ, ಎನ್ನುವುದು ನಮಗೆ ತಿಳಿದಿದೆ. ಅವೆರಡು ಸೀಸೆಗಳು ನೋಡಲು ಒಂದೇ ರೀತಿ ಇವೆ. ಹಾಗಾಗಿ, ಅಲ್ಲಿ ಯಾರಾದರು ಗೊತ್ತಿಲ್ಲದೆ ಔಷಧಿಯ ಬದಲಿಗೆ ವಿಷ ಇರುವ ಸೀಸೆಯನ್ನು ಕೈಗೆತ್ತಿಕೊಂಡು ಬಿಟ್ಟರೆ, ಅವರಿಗೆ 'ಅದರಲ್ಲಿ ಇರುವುದೇನು?' ಎನ್ನುವುದು ತಿಳಿದಿಲ್ಲವೆಂದಾಯಿತು. ಯಾವಾಗ ಅವರು ಅಪ್ಪಿತಪ್ಪಿ ಕೂಡಾ ವಿಷದ ಸೀಸೆಯನ್ನು

ಮುಟ್ಟುವುದಿಲ್ಲವೋ, ಆಗ ಅವರಿಗೆ ತಿಳಿದಿದೆಯೆಂದಾಯಿತು. ತಿಳಿಯದೆ ವಿಷದ ಸೀಸೆಯನ್ನು ಕೈಗೆತ್ತಿಕೊಂಡಾಗ, ಅವರಿಗೆ ಅದು ತಿಳಿದಿಲ್ಲವೆನ್ನುವುದು ದೃಢವಾಯಿತು. ಅದೇ ರೀತಿ ಕ್ರೋಧ ಉಂಟಾಗುತ್ತಿರುವಾಗ, 'ಯಾರಿಗೆ ಉಂಟಾಗುತ್ತಿದೆ?' ಎನ್ನುವ ತಿಳುವಳಿಕೆಯು ತನಗೆ ಇಲ್ಲದಿರುವುದರಿಂದ ಪದೇ, ಪದೇ ಕ್ರೋಧ ಉಂಟಾಗುತ್ತಲೇ ಇರುತ್ತದೆ. ಸರಿಯಾದ ತಿಳುವಳಿಕೆಯನ್ನು ಪಡೆದುಕೊಳ್ಳದೆ ಸುಮ್ಮನೆ ಅಹಂಕಾರದಿಂದ, 'ನಾನು ಕ್ರೋಧಗೊಂಡಿರುವುದು ನನಗೆ ಗೊತ್ತಾಗುತ್ತಿದೆ.' ಎಂದು ಹೇಳಿಕೊಂಡು ಓಡಾಡುವುದಾಗಿದೆ. ಯಾರಾದರೂ ಬೆಳಕಿದ್ದಾಗ ಮುಗ್ಗರಿಸುತ್ತಾರೆಯೇ? ಎಲ್ಲಿಯವರೆಗೆ ಮುಗ್ಗರಿಸುತ್ತಲೇ ಇರಲಾಗುವುದೋ, ಅಲ್ಲಿಯವರೆಗೂ ಅಂಧಕಾರದಿಂದಾಗಿ ತನಗೆ ತಿಳಿದಿಲ್ಲವೆಂದಾಯಿತು. ನಾವು ಕತ್ತಲಲ್ಲೇ ಇದ್ದುಕೊಂಡು ಕತ್ತಲನ್ನೇ ಬೆಳಕು ಎಂದು ತಿಳಿದುಕೊಂಡಿರುವುದು ನಮ್ಮ ತಪ್ಪಾಗಿದೆ. ಆದುದರಿಂದ ಸತ್ಸಂಗದಲ್ಲಿ ಕುಳಿತು ಒಮ್ಮೆ ಸರಿಯಾದ ತಿಳುವಳಿಕೆಯನ್ನು ಪಡೆದುಕೊಳ್ಳಬೇಕು. ನಂತರ ಈ ಕ್ರೋಧ-ಮಾನ-ಮಾಯಾ-ಲೋಭ ಎಲ್ಲಾ ಹೊರಟುಹೋಗುತ್ತವೆ.

**ಪ್ರಶ್ನಕರ್ತ:** ಕ್ರೋಧ ಎಲ್ಲರಿಗೂ ಉಂಟಾಗುವುದೇ ಆಗಿದೆಯಲ್ಲವೇ?!

**ದಾದಾಶ್ರೀ:** ನಿಮ್ಮ ಪಕ್ಕದಲ್ಲಿ ಕುಳಿತಿರುವವರನ್ನು ಕೇಳಿ, ಅವರಿಗೆ 'ಉಂಟಾಗುವುದಿಲ್ಲ'ವೆಂದು ಹೇಳುತ್ತಾರೆ.

**ಪ್ರಶ್ನಕರ್ತ:** ಅದು, ಅವರು ಸತ್ಸಂಗಕ್ಕೆ ಬರಲಾರಂಭಿಸಿದ ಮೇಲೆ ಕ್ರೋಧ ಉಂಟಾಗುವುದಿಲ್ಲ ಅಲ್ಲವೇ?!

**ದಾದಾಶ್ರೀ:** ಹೌದಾ, ನಿಮಗೆ ಅದು ಗೊತ್ತಾಗಿದೆಯೇ? ಹಾಗಿದ್ದರೆ, ಅವರೇನು ಔಷಧಿ ಕುಡಿಯಲಾಗಿದೆ? ಎನ್ನುವುದನ್ನು ಅವರಿಂದ ಕೇಳಿಕೊಳ್ಳಿ. ಅವರು ದ್ವೇಷದ ಮೂಲವನ್ನೇ ನಾಶಮಾಡುವಂತಹ ಔಷಧಿಯನ್ನು ಕುಡಿದಿದ್ದಾರೆ.

## ಕ್ರೋಧ, ತಿಳುವಳಿಕೆಯಿಂದ ನಿಯಂತ್ರಿಸಲಾಗುತ್ತದೆ!

**ಪ್ರಶ್ನಕರ್ತ:** ನನ್ನ ಬಹಳ ಹತ್ತಿರದ ಸಂಬಂಧಗಳಲ್ಲೇ ನನಗೆ ಹೆಚ್ಚು ಕ್ರೋಧ ಉಂಟಾಗುವುದು. ಬಹುಶಃ ಅವರ ದೃಷ್ಟಿಯಿಂದ ಅವರ ನಿಲುವು ಸರಿಯಾಗಿಯೇ

ಇರಬಹುದು. ಆದರೆ, ನನ್ನ ದೃಷ್ಟಿಯಿಂದ ನೋಡಿ ನಾನು ಕ್ರೋಧಕ್ಕೆ ಒಳಗಾಗುತ್ತೇನೆ. ಅಲ್ಲಿ ನಾನು ಕ್ರೋಧಗೊಳ್ಳಲು ಕಾರಣವೇನು?

**ದಾದಾಶ್ರೀ:** ನೀವು ರಸ್ತೆಯಲ್ಲಿ ಹೋಗುವಾಗ, ಯಾವುದೋ ಕಟ್ಟಡದ ಮೇಲಿಂದ ಒಂದು ಕಲ್ಲು ನಿಮ್ಮ ತಲೆಯ ಮೇಲೆ ಬಿದ್ದು ರಕ್ತ ಬಂದರೆ ಆಗ, ನೀವು ಕಟ್ಟಡ ಮೇಲೆ ಕ್ರೋಧಗೊಳ್ಳುತ್ತಿರೋ?

**ಪ್ರಶ್ನಕರ್ತ:** ಇಲ್ಲ. ಅದು ಅಕಸ್ಮಾತಾಗಿ ಆಗಿದೆ.

**ದಾದಾಶ್ರೀ:** ಆದರೂ, ಅಲ್ಲಿ ನೀವು ಕ್ರೋಧವನ್ನು ಯಾಕೆ ತೋರಿಸುವುದಿಲ್ಲ? ಯಾಕೆಂದರೆ, ನಿಮಗೆ ಅಲ್ಲಿ ಯಾರೂ ಕಾಣಲು ಸಿಕ್ಕಿರುವುದಿಲ್ಲ. ಹಾಗಾಗಿ, ನಿಮಗೆ ಕ್ರೋಧ ಉಂಟಾಗುವುದಾದರೂ ಹೇಗೆ?

**ಪ್ರಶ್ನಕರ್ತ:** ಅಲ್ಲಿ, ಬೇಕೆಂದು ಯಾರೂ ಹೊಡೆದಿಲ್ಲವಲ್ಲಾ?

**ದಾದಾಶ್ರೀ:** ಅದೇ, ನಾವು ರಸ್ತೆಯಲ್ಲಿ ಹೋಗುವಾಗ, ಚಿಕ್ಕ ಹುಡುಗ ಆಟವಾಡುತ್ತಿರುವಾಗ ಅವನಿಂದ ಎಸೆಯಲ್ಪಟ್ಟ ಕಲ್ಲು ನಮ್ಮ ತಲೆಗೆ ಬಿದ್ದು ರಕ್ತ ಬಂದರೆ ಆಗ, ನಾವು ಅವನ ಮೇಲೆ ಕ್ರೋಧಗೊಳ್ಳುತ್ತೇವೆ. ಯಾಕೆ? ಆ ಹುಡುಗ ಕಲ್ಲಿನಿಂದ ಹೊಡೆದಿದ್ದಾನೆಂದು ನಮಗೆ ಕಾಣಲು ಸಿಕ್ಕಿರುತ್ತಾನೆ. ಹಾಗಾಗಿ, ಅವನಿಂದಾಗಿ ತಲೆಗೆ ಪೆಟ್ಟು ಬಿದ್ದು ರಕ್ತ ಬಂದಿದೆ. ಅವನು ಯಾಕೆ ಹಾಗೆ ಎಸೆಯಬೇಕಿತ್ತು? ಎಂದು ಅವನ ಮೇಲೆ ಕ್ರೋಧಗೊಳ್ಳುತ್ತೇವೆ. ಗುಡ್ಡದ ಮೇಲಿಂದ ಕಲ್ಲು ಉರುಳಿಕೊಂಡು ತಲೆಯ ಮೇಲೆ ಬಿದ್ದು ರಕ್ತ ಬರುವಾಗ, ಎಲ್ಲಿಂದ ಬಿತ್ತು? ಎಂದು ನೋಡಲಾಗುತ್ತದೆಯೇ ಹೊರತು, ಗುಡ್ಡದ ಮೇಲೆ ಕ್ರೋಧಗೊಳ್ಳುವುದಿಲ್ಲ!

ಹುಡುಗನ ವಿಚಾರದಲ್ಲಿ, ನಮ್ಮ ಮನಸ್ಸಿಗೆ ಕೂಡಾ ಅನ್ನಿಸುತ್ತದೆ. ಆ ಹುಡುಗ ಬೇಕೆಂದೇ ಮಾಡಿದ್ದಾನೆಂದು. ಆದರೆ, ಯಾವ ಮನುಷ್ಯ ಕೂಡಾ ಬೇಕೆಂದು ಯಾರಿಗೂ ಹೊಡೆಯಲು ಸಾಧ್ಯವೇ ಇಲ್ಲ. ಹಾಗಾಗಿ, ಗುಡ್ಡದಿಂದ ಕಲ್ಲು ಉರುಳಿ ಪೆಟ್ಟು ಬೀಳುವುದಾಗಲಿ ಅಥವಾ ಹುಡುಗನಿಂದ ಎಸೆಯಲ್ಪಟ್ಟ ಕಲ್ಲಿನಿಂದ ಪೆಟ್ಟು ಬೀಳುವುದಾಗಲಿ, ಎರಡೂ ಒಂದೇ. ಆದರೆ, ಬ್ರಾಂತಿಯಿಂದಾಗಿ ನಮಗೆ ಅನ್ನಿಸುತ್ತದೆ. 'ಆ ಹುಡುಗ ಹಾಗೆ ಮಾಡಿದ್ದಾನೆ' ಎಂದು. ನಿಜವಾಗಿ, ಇಡೀ ಜಗತ್ತಿನಲ್ಲಿ ಯಾವ

ಮನುಷ್ಯನಿಗೇ ಆಗಲಿ, ಸ್ವತಃ ಅವನಿಂದ ಸಂಡಾಸಿಗೆ ಹೋಗುವಷ್ಟು ಶಕ್ತಿ ಕೂಡಾ ಅವನಲ್ಲಿ ಇಲ್ಲ!

ನಿಮಗೂ ಅದು ತಿಳಿದಿದೆ. ಯಾರೂ ಬೇಕೆಂದು ಹೊಡೆಯಲು ಬರುವುದಿಲ್ಲ. ಹಾಗಾಗಿ ಅಲ್ಲಿ ಕ್ರೋಧಗೊಳ್ಳುವುದು ಸರಿಯಲ್ಲವೆಂದು. ಆದರೂ, ನಂತರ ನೀವು ಹೇಳುತ್ತೀರಿ, 'ನನಗೆ ಕ್ರೋಧ ಬಂದುಬಿಡುತ್ತದೆ. ನಾನು ಕ್ರೋಧಿ ಸ್ವಭಾವದವನು.' ಎಂದು. ನಿಜವಾಗಿ, ಸ್ವಭಾವದಿಂದ ಕ್ರೋಧ ಉಂಟಾಗುವಂತಹದ್ದಲ್ಲ. ಹಾಗಿದ್ದರೆ, ನೀವು ಯಾಕೆ ಪೊಲೀಸ್ ಎದುರು ಕ್ರೋಧಗೊಳ್ಳುವುದಿಲ್ಲ? ಪೊಲೀಸ್ ನಿಮ್ಮನ್ನು ಜೋರುಮಾಡುವಾಗ, ನೀವು ಯಾಕೆ ಅವರ ಮೇಲೆ ಕ್ರೋಧ ತೋರಿಸುವುದಿಲ್ಲ? ಆದರೆ, ಮನೆಯಲ್ಲಿ ಹೆಂಡತಿಯ ಮೇಲೆ ಸಿಟ್ಟು ತೋರಿಸಲಾಗುತ್ತದೆ, ಮಕ್ಕಳ ಮೇಲೆ ಕ್ರೋಧಗೊಳ್ಳಲಾಗುತ್ತದೆ, ಅಕ್ಕ-ಪಕ್ಕದ ಮನೆಯವರ ಮೇಲೆ ಕ್ರೋಧಗೊಳ್ಳಲಾಗುತ್ತದೆ, ನಿಮ್ಮ ಕೈಕೆಳಗಿರುವವರ ಮೇಲೆ ಕ್ರೋಧಗೊಳ್ಳಲಾಗುತ್ತದೆ. ನಿಮ್ಮ ಸ್ವಭಾವವೇ ಕ್ರೋಧಿಯಾಗಿದ್ದರೆ, ನಿಮ್ಮ Boss (ಮೇಲಧಿಕಾರಿ) ಜೊತೆಯಲ್ಲಿ ವ್ಯವಹರಿಸುವಾಗ ಯಾಕೆ ನಿಮಗೆ ಕ್ರೋಧ ಉಂಟಾಗುವುದಿಲ್ಲ? ಕ್ರೋಧ, ಮನುಷ್ಯನ ಸ್ವಭಾವದಿಂದಾಗಿ ಬರುವಂತಹದ್ದಲ್ಲ. ಅದೇನಿದ್ದರೂ ತನಗೆ ಬೇಕಾದ ಹಾಗೆ ನಡೆಸಬೇಕೆಂದಿದ್ದಾಗ ಕ್ರೋಧಗೊಳ್ಳುವುದಾಗಿದೆ.

**ಪ್ರಶ್ನಕರ್ತ:** ಅದನ್ನು ಯಾವ ರೀತಿಯಿಂದ ಕಂಟ್ರೋಲ್ ಮಾಡುವುದು?

**ದಾದಾಶ್ರೀ:** ಅದು ತಿಳುವಳಿಕೆಯಿಂದ ಸಾಧ್ಯವಾಗುತ್ತದೆ. ನಿಮ್ಮ ಎದುರಿಗೆ ಯಾರೇ ಬಂದರೂ, ಅವರು ಹೇಗೇ ನಿಮ್ಮೊಂದಿಗೆ ವ್ಯವಹರಿಸಿದರೂ, ಅವರು ನಿಮ್ಮ ಕರ್ಮದ ಫಲವನ್ನು ನಿಮಗೆ ಕೊಡಲು ಒಂದು ನಿಮಿತ್ತರಾಗಿದ್ದಾರೆ. ಅವರು ನಿಮ್ಮ ಕರ್ಮದ ಫಲವನ್ನು ನೀಡಲು ನಿಮಗೊಂದು ನಿಮಿತ್ತರಾಗಿ ಬಂದಿದ್ದಾರೆಂದು ನೀವು ತಿಳಿದುಕೊಂಡಾಗ, ಕ್ರೋಧವು ಕಂಟ್ರೋಲ್ ಗೆ ಬಂದುಬಿಡುತ್ತದೆ. ಹೇಗೆ ಗುಡ್ಡದ ಮೇಲಿಂದ ಕಲ್ಲು ಉರುಳಿಕೊಂಡು ನಿಮ್ಮ ಮೇಲೆ ಬೀಳುವಾಗ, ಎಲ್ಲಿಂದ ಬಿತ್ತು? ಎಂದು ಮೇಲೆ ನೋಡಿ ತಿಳಿದು ಬಂದಾಗ, ನೀವು ಕ್ರೋಧಗೊಳ್ಳಲು ಹೋಗುವುದಿಲ್ಲ. ಅದೇ ರೀತಿ, ಎಲ್ಲವೂ ಗುಡ್ಡದ ಹಾಗೆಯೇ ಎಂದು ಅರ್ಥಮಾಡಿಕೊಳ್ಳ ಬೇಕಾಗಿರುವುದು ಬಹಳ ಅಗತ್ಯ!

ನಾವು ರಸ್ತೆಯಲ್ಲಿ ಹೋಗುವಾಗ, ಎದುರಿನಿಂದ ಮೋಟಾರ್ ಗಾಡಿಯ ಚಾಲಕನು wrong side (ತಪ್ಪು ಬದಿ)ಯಿಂದ ಬರುತ್ತಿರುವಾಗ, ಅವನಿಗೆ ಜೋರು ಮಾಡಬೇಕೆಂದು ನಾವು ಅಡ್ಡ ನಿಲ್ಲಲು ಹೋಗುತ್ತೇವೆಯೇ? ಕ್ರೋಧಗೊಂಡು ಅವನಿಗೆ ಎದುರಾಗುತ್ತೇವೆಯೇ? ಯಾಕೆ ಹಾಗೆ ಮಾಡುವುದಿಲ್ಲ? ಹಾಗೆ ಮಾಡಲು ಹೋದರೆ, ಅವನ ಮೋಟಾರ್ ಗಾಡಿ ನಿಮ್ಮನ್ನು ಹೊಡೆದುಕೊಂಡು ಹೋಗುತ್ತದೆ. ಅಲ್ಲೇನಾದರೂ ನೀವು ಕ್ರೋಧಗೊಳ್ಳಲು ಹೋಗುವಿರೋ? ಇಲ್ಲ. ಅಲ್ಲಿ ಯಾಕೆ ನೀವು ಕ್ರೋಧಗೊಳ್ಳುವುದಿಲ್ಲ? ನಿಮಗೆ ತಿಳಿದಿದೆ, 'ನಾನು ಒಂದು ಬದಿಗೆ ಹೋಗಿ ನಿಲ್ಲದಿದ್ದರೆ, ನನ್ನ ಮೃತ್ಯು ಖಂಡಿತ.' ಎಂದು. ಅದೇ ರೀತಿ, ಈ ಕ್ರೋಧಗೊಳ್ಳುವುದರಿಂದ ಅದಕ್ಕಿಂತಲೂ ಹೆಚ್ಚಿನ ಮರಣಕ್ಕೆ ತುತ್ತಾಗಬೇಕಾಗುತ್ತದೆ. ಕ್ರೋಧದಿಂದ ಉಂಟಾಗುವ ಅಪಾಯ ನಮ್ಮ ಕಣ್ಣಿಗೆ ಕಂಡುಬರುವುದಿಲ್ಲ. ಅದೇ ಎದುರಿನಿಂದ ಬರುವ ಮೋಟಾರ್ ಗಾಡಿಯಿಂದಾಗುವ ಅಪಾಯ ನಮಗೆ ಕಣ್ಣೆದುರಿಗೆ ಕಂಡುಬರುವುದರಿಂದ ನಮ್ಮ ವರ್ತನೆ ಬದಲಾಗಿಬಿಡುತ್ತದೆ! ಯಾರಾದರು ರಸ್ತೆಯಲ್ಲಿ ಚಲಿಸುತ್ತಿರುವ ಗಾಡಿಗೆ ಎದುರಾಗಿ ನಿಲ್ಲಲು ಹೋಗುತ್ತಾರೆಯೇ? ಎದುರಿನಿಂದ ಬರುತ್ತಿರುವ ಮೋಟಾರ್ ಗಾಡಿಯ ಚಾಲಕನ ತಪ್ಪಿದ್ದರೂ, ಅವನ ಮೇಲೆ ಯಾರಾದರು ಕ್ರೋಧಗೊಳ್ಳಲು ಹೋಗುತ್ತಾರೆಯೇ?

**ಪ್ರಶ್ನಕರ್ತ:** ಇಲ್ಲ.

**ದಾದಾಶ್ರೀ:** ಹಾಗಾಗಿಯೇ ಜೀವನದಲ್ಲೂ ಸರಿಯಾದ ತಿಳುವಳಿಕೆ ಇರಬೇಕಾಗಿರುವುದು ಬಹಳ ಅಗತ್ಯ.

## Causes (ಕಾರಣವು) ಬದಲಾದಾಗ ಮಾತ್ರ ಪರಿಣಾಮವು ಬದಲಾಗುವುದು!

ಒಬ್ಬ ವ್ಯಕ್ತಿ ನನ್ನ ಬಳಿ ಬಂದು ಕೇಳಿದರು, 'ಎಷ್ಟೇ ಪ್ರಯತ್ನಿಸಿದರೂ ಈ ಕ್ರೋಧವನ್ನು ಇನ್ನೂ ಯಾಕೆ ನಮ್ಮಿಂದ ತೆಗೆದುಹಾಕಲು ಸಾಧ್ಯವಾಗುತ್ತಿಲ್ಲ?' ಎಂದು. ಆಗ ನಾನು ಅವರಿಗೆ ಹೇಳಿದೆ, 'ಕ್ರೋಧವನ್ನು ತೆಗೆದುಹಾಕುವ ಸರಿಯಾದ ಉಪಾಯ ನಿಮಗೆ ಗೊತ್ತಿಲ್ಲ.'ವೆಂದು. ಅದಕ್ಕೆ ಅವರು ಹೇಳುತ್ತಾರೆ, 'ಕ್ರೋಧವನ್ನು ತೆಗೆದುಹಾಕಲು ಅನೇಕ ಉಪಾಯಗಳನ್ನು ನಮ್ಮ ಶಾಸ್ತ್ರಗಳಲ್ಲಿ ಬರೆಯಲಾಗಿದೆ ಹಾಗೂ ಅವೆಲ್ಲವನ್ನು

ನಾನು ಪಾಲಿಸಿದರೂ ಸಹ ಕ್ರೋಧವನ್ನು ಮಾತ್ರ ಹೋಗಲಾಡಿಸಲು ಸಾಧ್ಯವಾಗಿಲ್ಲ.' ಎಂದಾಗ, ಅವರಿಗೆ ಹೇಳಿದೆ, 'ಸಮ್ಯಕ್ (ಆತ್ಮಜ್ಞಾನದ) ಉಪಾಯ ಮಾಡಬೇಕು.' ಎನ್ನುವಾಗ ಹೇಳುತ್ತಾರೆ, 'ಸಮ್ಯಕ್ (ಆತ್ಮಜ್ಞಾನದ) ಉಪಾಯವನ್ನು ಬಹಳಷ್ಟು ಓದಿದ್ದೇನೆ. ಆದರೆ, ಅದರಿಂದೇನೂ ಪ್ರಯೋಜನವಾಗಿಲ್ಲ.' ಎಂದು. ನಾನು ಹೇಳಿದೆ, 'ಕ್ರೋಧವನ್ನು ನಿಲ್ಲಿಸಲು ಉಪಾಯ ಹುಡುಕಲು ಹೋಗುವುದು ಮೂರ್ಖತನವಾಗಿದೆ. ಯಾಕೆಂದರೆ, ಈ ಕ್ರೋಧ ಅನ್ನುವುದು ಪರಿಣಾಮವಾಗಿದೆ. ಹೇಗೆ ನೀವು ಶಾಲೆಯಲ್ಲಿ ಪರೀಕ್ಷೆ ಬರೆಯುತ್ತೀರಿ, ಅದರಂತೆ ನಿಮ್ಮ result (ಫಲಿತಾಂಶವು) ಹೊರಬೀಳುತ್ತದೆ. ಅಲ್ಲಿ ನೀವು ಫಲಿತಾಂಶವನ್ನು ಬದಲಿಸುವ ಅಥವಾ ತೆಗೆದುಹಾಕುವ ಉಪಾಯ ಮಾಡಲು ಹೋಗುವುದು ಮೂರ್ಖತನದ ವಿಚಾರವಾಗಿದೆ. ನಿಮಗೆ ಯಾವುದೇ ಬಗೆಯ ಫಲಿತಾಂಶ ಸಿಗಬೇಕಿದ್ದರೆ, ಆ ಫಲಿತಾಂಶ ಯಾವ ಕಾರಣದಿಂದಾಗಿ ಪಡೆಯಲಾಗಿರುವ ಪರಿಣಾಮವಾಗಿದೆ? ಅದನ್ನು ನೀವು ತಿಳಿದುಕೊಂಡು, ಅಲ್ಲಿ ಬದಲಾವಣೆಯನ್ನು ನೀವು ತಂದುಕೊಳ್ಳಬೇಕಾಗಿರುವುದು ಅತ್ಯಗತ್ಯ.

ಸಾಮಾನ್ಯವಾಗಿ ಎಲ್ಲಾ ಜನರು ಏನು ಹೇಳುತ್ತಾರೆ, 'ಕ್ರೋಧವನ್ನು ತೆಗೆದುಹಾಕಬೇಕು, ಕ್ರೋಧವನ್ನು ನಾಶಮಾಡಬೇಕು.' ಎಂದು. ಆದರೆ, ಅದು ಸರಿಯಲ್ಲ. ಯಾಕೆ ಹಾಗೆಲ್ಲಾ ಮಾಡಲು ಹೋಗಬೇಕು? ಬೇಕಿಲ್ಲದ ಕೆಲಸಕ್ಕೆ ಸುಮ್ಮನೆ ತಲೆಕೆಡಿಸಿಕೊಳ್ಳುವುದು! ಇಲ್ಲಿಯವರೆಗೂ ಎಷ್ಟೇ ಕ್ರೋಧವನ್ನು ನಾಶಮಾಡಬೇಕೆಂದು ಪ್ರಯತ್ನಿಸಿದರೂ, ಯಾರಿಂದಲಾದರೂ ಕ್ರೋಧವನ್ನು ಹೋಗಲಾಡಿಸಲಾಗಿದೆಯೇ? ಎಂದು, ನಾವು ಅವರನ್ನು ಕೇಳಿದರೆ, ಅವರು ಹೇಳುತ್ತಾರೆ, 'ಇಲ್ಲ. ಏನೋ ಸ್ವಲ್ಪ ಮಟ್ಟಿಗೆ ನಿಯಂತ್ರಿಸಲಾಗಿದೆ.' ಎಂದರು. ಆದರೂ, ಸಂಪೂರ್ಣವಾಗಿ ಹೋಗಿಲ್ಲ. ಇನ್ನೂ ಕ್ರೋಧ ಉಳಿದುಕೊಂಡಿರುವುದರಿಂದ ಕ್ರೋಧವನ್ನು ನೀವು ನಿಯಂತ್ರಿಸಲಾಗಿದೆಯೆಂದು ಹೇಳಲಾಗುವುದಿಲ್ಲವೆಂದು, ನಾವು ಹೇಳುವಾಗ ಅವರು ಕೇಳಿದರು, 'ಹಾಗಾದರೆ, ನಿಮ್ಮ ಬಳಿ ಬೇರೇನಾದರೂ ಉಪಾಯವಿದೆಯೇ?' ಎಂದು, ಆಗ ನಾನು ಅವರಗೆ ಹೇಳಿದೆ, 'ಉಪಾಯವೇನೋ ಇದೆ. ಆದರೆ, ನೀವು ಮಾಡಲು ತಯಾರಿದ್ದೀರಾ?' ಎಂದು ಕೇಳುವಾಗ, ಅದಕ್ಕೆ ಅವರು ಒಪ್ಪಿಕೊಂಡರು. ನಂತರ ಅವರಿಗೆ ಹೇಳಿದೆ, ಹಾಗಿದ್ದರೆ, ನೀವು ಒಂದು ವಿಚಾರವನ್ನು ಗಮನಿಸಬೇಕು. ಅದೇನೆಂದರೆ, ಜಗತ್ತಿನಲ್ಲಿ ನಿಮಗೆ ಹೆಚ್ಚು

ಕ್ರೋಧ ಯಾರ ಮೇಲೆಲ್ಲಾ ಉಂಟಾಗುತ್ತದೆ? ಎಲ್ಲೆಲ್ಲಿ ಉಂಟಾಗುತ್ತದೆ? ಎನ್ನುವುದನ್ನು ನೀವು ಒಂದುಕಡೆ 'note' (ಬರೆದು) ಇಟ್ಟುಕೊಳ್ಳಿ ಹಾಗೂ ಎಲ್ಲೆಲ್ಲಿ ಕ್ರೋಧ ಉಂಟಾಗುವುದಿಲ್ಲ ಅದನ್ನೂ ಸಹ ಗಮನಿಸಿ. ಯಾವ ವ್ಯಕ್ತಿಯೊಂದಿಗೆ ಕ್ರೋಧ ಉಂಟಾಗುವುದಿಲ್ಲ ಅದನ್ನೂ ಒಂದುಕಡೆ ಬರೆದಿಡಿ. ಕೆಲವು ವ್ಯಕ್ತಿಗಳು ನಿಮಗೆ ತೊಂದರೆ ಕೊಟ್ಟರೂ, ನಿಮಗೆ ಅವರ ಮೇಲೆ ಕ್ರೋಧ ಉಂಟಾಗುವುದಿಲ್ಲ ಹಾಗೂ ಕೆಲವರ ವಿಚಾರವು ಒಳ್ಳೆಯದೇ ಆಗಿದ್ದರೂ, ಅವರ ಬಗ್ಗೆ ಕ್ರೋಧ ಉಂಟಾಗುವುದು. ಇವೆಲ್ಲದಕ್ಕೂ ಏನೋ ಕಾರಣ ಇರಲೇ ಬೇಕಲ್ಲವೇ?

**ಪ್ರಶ್ನಕರ್ತ:** ಅದು, ಕೆಲವರ ಬಗ್ಗೆ ಮನಸ್ಸಿನೊಳಗೆ ಕ್ರೋಧದ ಗ್ರಂಥಿಯನ್ನು ಕಟ್ಟಿಕೊಳ್ಳಲಾಗಿರಬಹುದು?

**ದಾದಾಶ್ರೀ:** ಹೌದು. ಗ್ರಂಥಿಯನ್ನು ಕಟ್ಟಿಕೊಳ್ಳಲಾಗಿರುತ್ತದೆ. ಆದರೆ, ಈಗ ಆ ಗ್ರಂಥಿಯಿಂದ ಬಿಡಿಸಿಕೊಳ್ಳಲು ಏನು ಮಾಡುವುದು? ಪರೀಕ್ಷೆಯಂತೂ ಬರೆದಾಗಿದೆ, ಅದರಂತೆ ಫಲಿತಾಂಶವು ಸಿಗುವುದೇ ಆಗಿದೆ. ಈಗ ಯಾರೊಂದಿಗೆ ನಮಗೆಷ್ಟು ಬಾರಿ ಕ್ರೋಧ ಉಂಟಾಗಬೇಕೋ, ಅಷ್ಟು ಬಾರಿ ಕ್ರೋಧ ಉಂಟಾಗುವುದೇ ಆಗಿದೆ. ಯಾಕೆಂದರೆ, ಅವರೊಂದಿಗೆ ನಾವು ಈಗಾಗಲೇ ಕ್ರೋಧದ ಗ್ರಂಥಿಯನ್ನು ಕಟ್ಟಿಕೊಂಡಿರುವುದೇ ಆಗಿದೆ. ಆದರೆ, ಈಗ ನಾವೇನು ಮಾಡಬೇಕು? ಯಾರ ಮೇಲೆ ಕ್ರೋಧ ಉಂಟಾಗುವುದೋ, ಅವರ ಬಗ್ಗೆ ಈಗ ನಮ್ಮ ಮನಸ್ಸನ್ನು ಕೆಡದಂತೆ ನೋಡಿಕೊಳ್ಳಬೇಕು. ಮನಸ್ಸಿನಲ್ಲಿ ಸುಧಾರಣೆಯನ್ನು ತಂದುಕೊಳ್ಳಬೇಕು. 'ನಮ್ಮ ಪ್ರಾರಬ್ಧದಿಂದಾಗಿ ಆ ವ್ಯಕ್ತಿಯ ವರ್ತನೆಯು ನಮಗೆ ಕ್ರೋಧಗೊಳ್ಳುವಂತೆ ಮಾಡಿದೆ. ಆದರೆ, ಅವರು ಹೇಗೇ ವರ್ತಿಸುತ್ತಿದ್ದರೂ, ಅದೆಲ್ಲವೂ ನಮ್ಮ ಕರ್ಮದ ಉದಯದಿಂದಾಗಿ ನಮ್ಮ ಮುಂದೆ ಅವರು ಬರಬೇಕಾಗಿದೆ.' ಎಂದು ಅರಿತುಕೊಂಡು, ನಮ್ಮ ಮನಸ್ಸಿನಲ್ಲಿ ಸುಧಾರಣೆಯನ್ನು ತಂದುಕೊಳ್ಳಬೇಕು. ಹೀಗೆ ಸುಧಾರಣೆಯನ್ನು ಮಾಡಿಕೊಂಡಾಗ, ಆ ವ್ಯಕ್ತಿಯ ಬಗ್ಗೆ ನಮ್ಮ ಮನಸ್ಸಿನಲ್ಲಿ ಯಾವಾಗ ಬದಲಾವಣೆ ಕಂಡು ಬರುವುದೋ, ಆಗ ಅವರ ಮೇಲೆ ನಮಗೆ ಉಂಟಾಗುವ ಕ್ರೋಧವು ನಿಂತುಹೋಗುತ್ತದೆ. ಸ್ವಲ್ಪ ಸಮಯದವರೆಗೆ ಹಿಂದಿನ effect ನಿಂದಾಗಿ ಕೆಲವೊಮ್ಮೆ ಅವರ ಮೇಲೆ ಕ್ರೋಧ

ಉಂಟಾಗಬಹುದು. ಆದರೆ, ನಿಧಾನವಾಗಿ ಹಿಂದಿನ ಪರಿಣಾಮವೆಲ್ಲಾ ಪೂರ್ಣಗೊಂಡ ಮೇಲೆ ನಮ್ಮಿಂದ ಕ್ರೋಧಗೊಳ್ಳುವುದು ನಿಂತುಹೋಗುತ್ತದೆ.

ಇದು ಸೂಕ್ಷ್ಮ ವಿಚಾರವಾಗಿರುವುದರಿಂದ ಇದನ್ನು ಜನರಿಂದ ತಿಳಿಯಲಾಗದೆ ಸರಿಯಾದ ಉಪಾಯವನ್ನು ಕಂಡುಕೊಳ್ಳಲು ಸಾಧ್ಯವಾಗಿಲ್ಲ. ಆದರೂ ಕ್ರೋಧವನ್ನು ಶಮನ ಮಾಡಲು ಪ್ರತಿಯೊಬ್ಬರೂ ಒಂದಲ್ಲಾ ಒಂದು ಉಪಾಯವನ್ನು ಮಾಡುತ್ತಲೇ ಇರಲಾಗಿದೆಯಲ್ಲವೇ? ಉಪಾಯವಿಲ್ಲದ ಜಗತ್ತು ಇರಲು ಸಾಧ್ಯವೇ ಇಲ್ಲವಲ್ಲಾ! ಜನರು ಫಲಿತಾಂಶವನ್ನು ನಾಶಮಾಡಲು ಪ್ರಯತ್ನಿಸುತ್ತಾರೆ. ಆದರೆ, ಮೂಲ ಕಾರಣವಾಗಿರುವ ಕ್ರೋಧ-ಮಾನ-ಮಾಯಾ-ಲೋಭ ಇವುಗಳ ನಿರ್ಮೂಲನೆ ಮಾಡುವ ಉಪಾಯವು ಸೂಕ್ಷ್ಮ ವಿಚಾರವಾಗಿದೆ. ನಿಜವಾಗಿ ನೋಡಿದರೆ, ಪರಿಣಾಮದಲ್ಲಿ ಬದಲಾವಣೆ ತರಲು ಪ್ರಯತ್ನಿಸುವುದು ಸರಿಯಲ್ಲ. ಬದಲಿಗೆ ಅದರ ಮೂಲ causes(ಕಾರಣ) ಏನಿದೆ, ಅದನ್ನು ನಿರ್ಮೂಲನೆ ಮಾಡಿದರೆ, ಆಗ ಕ್ರೋಧ-ಮಾನ-ಮಾಯಾ-ಲೋಭ ಎಲ್ಲವೂ ಹೊರಟುಹೋಗುತ್ತವೆ. ಹಾಗಾಗಿ, ಈ ಸೂಕ್ಷ್ಮ ವಿಚಾರವನ್ನು ನಾವು ತಿಳಿದುಕೊಳ್ಳಬೇಕು. ಅಜಾಗೃತರಾಗಿದ್ದರೆ ಹೇಗೆ ತಾನೆ ಸರಿಯಾದ ಉಪಾಯವನ್ನು ಮಾಡಲು ಸಾಧ್ಯ?

**ಪ್ರಶ್ನಕರ್ತ:** Causes (ಕಾರಣವನ್ನು) ನಿರ್ಮೂಲನೆ ಮಾಡುವುದು ಹೇಗೆ? ಎನ್ನುವುದರ ಬಗ್ಗೆ ಸ್ವಲ್ಪ ನಮಗೆ ಅರ್ಥವಾಗುವಂತೆ ತಿಳಿಸಿಕೊಡಿ.

**ದಾದಾಶ್ರೀ:** ಉದಾಹರಣೆಗೆ: ಈಗ ನನಗೆ ಒಬ್ಬರ ಮೇಲೆ ಕ್ರೋಧ ಉಂಟಾದಾಗ, ನಾನು ಒಂದು ನಿರ್ಧಾರಕ್ಕೆ ಬಂದುಬಿಡಲಾಗುತ್ತದೆ, 'ಈಗೇನು ನನಗೆ ಅವರ ಮೇಲೆ ಕ್ರೋಧ ಉಂಟಾಗುತ್ತಿದೆ. ಅದು, ನಾನು ಈ ಹಿಂದೆ ಅವರಲ್ಲಿ ದೋಷವನ್ನು ನೋಡಿರುವುದರ ಪರಿಣಾಮವಾಗಿ ನನಗೀಗ ಕ್ರೋಧ ಉಂಟಾಗುತ್ತಿದೆ.' ಎನ್ನುವುದನ್ನು ನಾವು ಅರಿತುಕೊಂಡು, ಈಗ ಅವರಲ್ಲಿ ಎಷ್ಟೇ ದೋಷಗಳು ನಮಗೆ ಕಂಡುಬಂದರೂ, ನಾವು ಮನಸ್ಸಿಗೆ ತೆಗೆದುಕೊಳ್ಳದೇ ಹೋದಾಗ, ಅವರ ಮೇಲೆ ಉಂಟಾಗುವ ಕ್ರೋಧವು ನಿಂತುಹೋಗುವುದು. ನಂತರ ಅಲ್ಪ-ಸ್ವಲ್ಪ ಉಳಿಕೆಯಾಗಿರುವ ಕ್ರೋಧಗೊಳ್ಳುವ ಪೂರ್ವದ ಪರಿಣಾಮವೇನಿದೆ, ಅದು ಫಲಿತಾಂಶದ ರೂಪದಲ್ಲಿ ನಮ್ಮಿಂದ ಹೊರಬಂದು ಖಾಲಿಯಾದ ಮೇಲೆ ನಮಗೆ ಕ್ರೋಧ ಉಂಟಾಗುವುದು ನಿಂತುಹೋಗುತ್ತದೆ.

**ಪ್ರಶ್ನಕರ್ತ:** ಬೇರೆಯವರಲ್ಲಿ ದೋಷ ನೋಡುವುದರಿಂದ ನಮ್ಮಲ್ಲಿ ಕ್ರೋಧ ಉಂಟಾಗುತ್ತದೆಯೇ?

**ದಾದಾಶ್ರೀ:** ಹೌದು. ಈಗೇನು ನಮ್ಮಿಂದ ಬೇರೆಯವರಲ್ಲಿ ದೋಷವನ್ನು ನೋಡಲಾಗುತ್ತಿದೆಯೋ, ಅದು ತಪ್ಪೆಂದು ನಾವು ಅದನ್ನು ಅರಿಯುವಂತಾಗಬೇಕು. ಅವೆಲ್ಲವೂ ನಮ್ಮ ಹಿಂದಿನ ತಪ್ಪು ಪರಿಣಾಮಗಳು ಹೊರಬೀಳುತ್ತಿವೆಯೆಂದು ಅರಿತುಕೊಂಡು, ಅವುಗಳ ಕಡೆಗೆ ನಾವು ಗಮನಕೊಡದೇ ಹೋದಾಗ, ನಮಗೆ ಉಂಟಾಗುವ ಕ್ರೋಧ ಕೂಡಾ ನಿಂತುಹೋಗುತ್ತದೆ. ಯಾವಾಗ ನಾವು ಮತ್ತೊಬ್ಬರಲ್ಲಿ ದೋಷ ನೋಡುವುದು ನಿಂತುಹೋಗುವುದೋ, ಆಗ ಕ್ರೋಧಗೊಳ್ಳುವುದು ಸಹ ಸಂಪೂರ್ಣವಾಗಿ ನಿಂತುಹೋಗುತ್ತದೆ.

## ಕ್ರೋಧದ ಮೂಲದಲ್ಲಿ ಅಹಂಕಾರವಿದೆ!

ಜನರು ಕೇಳುತ್ತಾರೆ, 'ನಮ್ಮ ಕ್ರೋಧದ ನಿವಾರಣೆಗೇನು ಔಷಧಿ?' ಎಂದು. ಆಗ ನಾನು ಅವರನ್ನೇ, 'ಈಗ ನೀವೇನು ಔಷಧಿ ಮಾಡುತ್ತಿದ್ದೀರಿ? ಎಂದು ಪ್ರಶ್ನಿಸುವಾಗ, ಅದಕ್ಕೆ ಅವರು, 'ನಾವು ಕ್ರೋಧ ಉಂಟಾಗದಂತೆ ನಿಗ್ರಹಿಸಲು ಪ್ರಯತ್ನಿಸಲಾಗಿದೆ.' ಎಂದು ಹೇಳುವಾಗ ನಾನು ಕೇಳಿದೆ, 'ನೀವು ಕ್ರೋಧವನ್ನು ಅರಿತುಕೊಂಡು ನಿಗ್ರಹಿಸುತ್ತಿರುವಿರೋ ಅಥವಾ ಅರಿತುಕೊಳ್ಳದೆ ನಿಗ್ರಹಿಸಲು ಪ್ರಯತ್ನಿಸುತ್ತಿರುವಿರೋ? ಮೊದಲಿಗೆ ಈ ಕ್ರೋಧ ಯಾಕಾಗಿ ಉಂಟಾಗುತ್ತಿದೆಯೆಂದು ಅರಿತುಕೊಳ್ಳಬೇಕಲ್ಲವೇ? ಕ್ರೋಧ ಹಾಗೂ ಶಾಂತಿ ಎರಡೂ ಜೊತೆ, ಜೊತೆಗೆ ಇರುವಂತಹದ್ದು. ನೀವು ಕ್ರೋಧವನ್ನು ಸರಿಯಾಗಿ ಕಂಡುಕೊಳ್ಳದೆ ಹೋದರೆ, ಶಾಂತಿಯ ಮೇಲೆ ಒತ್ತಡ ಹಾಕಿದ ಹಾಗೆ. ಆಗ, ನಿಮ್ಮಲ್ಲಿ ಶಾಂತಿ ನಾಶವಾಗುತ್ತದೆ! ಹಾಗಾಗಿ, 'ಕ್ರೋಧ ನಿಗ್ರಹಿಸಲು ಪ್ರಯತ್ನಿಸುವಂತಹ ವಸ್ತುವಲ್ಲ.' ಎನ್ನುವುದನ್ನು ಅರ್ಥಮಾಡಿಕೊಳ್ಳಬೇಕು, ಈ ಕ್ರೋಧ ಅನ್ನುವುದು ಒಂದು ಪ್ರಕಾರದ ಅಹಂಕಾರವೇ ಆಗಿದೆ. ಹಾಗಾಗಿ, ಅದು ಯಾವ ಪ್ರಕಾರದ ಅಹಂಕಾರದಿಂದಾಗಿ ಕ್ರೋಧ ಉಂಟಾಗುತ್ತಿದೆ?ಎನ್ನುವುದನ್ನು ನಾವು ಪರಿಶೀಲಿಸಿಕೊಳ್ಳಬೇಕಲ್ಲವೇ?

ಮನೆಯಲ್ಲಿ ಮಕ್ಕಳು ಗಾಜಿನ ಲೋಟ ಒಡೆದು ಹಾಕಿದರೆ, ಆಗ ನಮ್ಮ ಅಹಂಕಾರಕ್ಕೆ ಅನ್ನಿಸುತ್ತದೆ, 'ಗಾಜಿನ ಲೋಟ ಹೊಡೆದು ಹಾಕಿ ನಷ್ಟ ಉಂಟುಮಾಡಿದ್ದಾರೆ.' ಎಂದು. ಅಲ್ಲಿ ಲಾಭ-ನಷ್ಟವನ್ನು ಅಹಂಕಾರವು ಯೋಚಿಸುವುದು. ಅಂತಹ ಅಹಂಕಾರವನ್ನು ನಿರ್ಮೂಲನೆ ಮಾಡಲು ನಾವು ವಿಚಾರಮಾಡಬೇಕು. ಇಂತಹ ಅನೇಕ ಬಗೆಯ ಕೆಟ್ಟ-ಕೆಟ್ಟ ಆಲೋಚನೆಗಳನ್ನು ಅಹಂಕಾರವು ತುಂಬಿಸಿಕೊಂಡಿರುವುದರಿಂದಲೇ ಕ್ರೋಧ ಉಂಟಾಗುವುದು. ಈ ಕ್ರೋಧವಾಗಲಿ, ಲೋಭವಾಗಲಿ ಇವೆಲ್ಲವುಗಳ ಮೂಲದಲ್ಲಿ ಇರುವುದು ಅಹಂಕಾರವೇ ಆಗಿದೆ.

## ಕ್ರೋಧವನ್ನು ಶಾಂತಗೊಳಿಸಬಹುದು, ಅದು ಯಾವ ತಿಳುವಳಿಕೆಯಿಂದ?

ಕ್ರೋಧ ಅನ್ನುವುದು ಮೂಲತಃ ಅಹಂಕಾರವೇ ಆಗಿದೆ. ಅದನ್ನು ಪರಿಶೀಲಿಸಬೇಕು. ಅದು, ಯಾವ ಬಗೆಯ ಅಹಂಕಾರವಾಗಿದೆ? ಎನ್ನುವುದನ್ನು ಯಾವಾಗ ನಮ್ಮಿಂದ ಪರಿಶೀಲಿಸಿಕೊಳ್ಳಲು ಸಾಧ್ಯವಾಗುವುದೋ, ಆಗ ನಮಗೆ ತಿಳಿದುಬರುತ್ತದೆ, 'ಈ ಕ್ರೋಧ ಅನ್ನುವುದು ಕೇವಲ ಅಹಂಕಾರವೇ ಆಗಿದೆ' ಎಂದು. ಕ್ರೋಧ ಉತ್ಪನ್ನವಾಗಲು ಕಾರಣವೇನು? ನಿಮ್ಮ ಮನೆಯಲ್ಲಿ ಕೆಲಸದವಳು ಗಾಜಿನ ಲೋಟವನ್ನು ಒಡೆದು ಹಾಕಿದಾಗ, ಅವಳ ಮೇಲೆ ಕ್ರೋಧಗೊಳ್ಳಲಾಗುತ್ತದೆ. ಆದರೆ, ಅಲ್ಲಿ ಕೇವಲ ಗಾಜಿನ ಲೋಟ ಒಡೆದು ಹೋಗಿದೆ ಅಷ್ಟೇ. ಅದರಿಂದ ನಿಮಗೆ ಉಂಟಾಗಿರುವ ದೊಡ್ಡ ತೊಂದರೆಯಾದರೂ ಏನು? ಎಂದು ಕೇಳಿದರೆ, ಆಗ, ನೀವೇನು ಹೇಳುತ್ತೀರಿ, 'ಸುಮ್ಮನೆ ನಷ್ಟ.' ಎಂದು. ನಿಮಗೆ ನಷ್ಟವಾಗಿದೆಯೆಂದು ಕೆಲಸದವಳ ಮೇಲೆ ರೇಗಾಡುವುದು ಸರಿಯೇ? ಕೆಲಸದವರ ಮೇಲೆ ಅಹಂಕಾರ ತೋರಿಸುವುದು, ಜೋರುಮಾಡುವುದು ಇವೆಲ್ಲವನ್ನೂ ನೀವು ಬಹಳ ಸೂಕ್ಷ್ಮವಾಗಿ ಗಮನಕ್ಕೆ ತೆಗೆದುಕೊಂಡು, ವಿಚಾರ ಮಾಡಬೇಕು. ಆಗ, ಎಲ್ಲಾ ಬಗೆಯ ಅಹಂಕಾರವು ಹೊರಟುಹೋಗುತ್ತದೆ. ಅಲ್ಲಿ, ಗಾಜಿನ ಲೋಟ ಕೈತಪ್ಪಿ ಕೆಳಗೆ ಬೀಳುವಾಗ ನಿಮ್ಮಿಂದೇನಾದರೂ ತಡೆಯಲು ಅಥವಾ ನಿವಾರಿಸಲು ಸಾಧ್ಯವಾಗುವುದಾಗಿತ್ತೋ ಅಥವಾ ಅನಿವಾರ್ಯವಾಗಿ ಉಂಟಾಗುವುದೇ ಆಗಿತ್ತೋ? ಅನಿವಾರ್ಯ ಸಂದರ್ಭದ ಸಂಯೋಗವು ಕೆಲವೊಮ್ಮೆ ಉಂಟಾಗುವುದೋ, ಇಲ್ಲವೋ? ಆದರೂ ಕೆಲಸದವರ

ಮೇಲೆ ಮನೆಯ ಯಜಮಾನ ಜೋರುಮಾಡುತ್ತಾನೆ, 'ನೀನು ಗಾಜಿನ ಲೋಟವನ್ನು ಒಡೆದು ಹಾಕಿದ್ದೀಯಾ, ಏನು ಗಟ್ಟಿಯಾಗಿ ಹಿಡಿಯಲು ಕೈಯಲ್ಲಿ ಬಲ ಇಲ್ಲವೇ? ನೀನು ಯಾವಾಗಲೂ ಹೀಗೆ, ಹಾಗೆ.' ಎಂದು, ಕೆಲಸದವರನ್ನು ಸುಮ್ಮನೆ ಅನಾವಶ್ಯಕವಾಗಿ ನಿಂದಿಸುವುದರಿಂದ ಏನು ಪ್ರಯೋಜನ? ಅದೇ ಮನೆಯಲ್ಲಿ ಅಳಿಯನ ಕೈಯಿಂದ ಗಾಜಿನ ಲೋಟ ಒಡೆದು ಹೋದರೆ, ಆಗ ಏನೂ ಮಾತನಾಡುವುದಿಲ್ಲ! ಯಾಕೆಂದರೆ, ಅಳಿಯನ ಮನೆಯಲ್ಲಿ superior. ಹಾಗಾಗಿ, ಬಾಯಿಮುಚ್ಚಿಕೊಂಡು ಇದ್ದುಬಿಡುವುದು. ಆದರೆ, ಮನೆಯ ಕೆಲಸದವರು inferior. ಆದ್ದರಿಂದ, ಕೆಲಸದವರೊಂದಿಗೆ ಯಾವಾಗಲೂ ಕಿರಿಕಿರಿ ಮಾಡುತ್ತಲೇ ಇರುವುದು!!! ಇದೆಲ್ಲಾವೂ egoism! Superior ಮುಂದೆ ಎಲ್ಲರೂ ಸುಮ್ಮನಿದ್ದು ಬಿಡುತ್ತಾರಲ್ಲವೇ? ಈಗ, ನಮ್ಮ (ದಾದಾರವರ) ಕೈಯಿಂದ ಏನಾದರು ಗಾಜಿನ ವಸ್ತು ಬಿದ್ದು ಒಡೆದು ಹೋದರೆ, ಆಗ ಯಾರೂ ಏನೂ ಹೇಳುವುದಿಲ್ಲ ಹಾಗೂ ಯಾರ ಮನಸ್ಸಿನಲ್ಲೂ ಸಹ ಯಾವುದೇ ವಿಚಾರ ಬರುವುದಿಲ್ಲ. ಅದೇ ಕೆಲಸದವರ ಕೈಯಿಂದ ಒಡೆದು ಹೋದರೆ ಆಗ?!

ಈ ಜಗತ್ತಿನಲ್ಲಿ ಯಾರೂ ನಿಜವಾದ ನ್ಯಾಯ ಏನೆಂದು ಅರಿತುಕೊಂಡೇ ಇಲ್ಲ. ಸರಿಯಾದ ತಿಳುವಳಿಕೆ ಇಲ್ಲದಿರುವುದರಿಂದ ಅನೇಕ ಬಗೆಯ ಗೊಂದಲಗಳು ಸೃಷ್ಟಿಯಾಗುತ್ತವೆ. ಬುದ್ಧಿಯಿಂದಲಾದರೂ ತಿಳಿದುಕೊಳ್ಳಲು ಸಾಧ್ಯವಾಗುವುದಾದರೆ ಬಹಳಷ್ಟಾಯಿತು! ಬುದ್ಧಿ ವಿಕಾಸಗೊಂಡರೆ, ತಿಳುವಳಿಕೆ ಸ್ವಲ್ಪ ಮಟ್ಟಿಗೆ ಇದ್ದರೂ, ಆಗ ಜಗಳ ಉಂಟಾಗುವುದೇ ಇಲ್ಲ. ಈಗ ನೀವು ಮನೆಯ ಕೆಲಸದವಳೊಂದಿಗೆ ಜಗಳವಾಡುವುದರಿಂದ ಏನು ಒಡೆದು ಹೋಗಿರುವ ಗಾಜಿನ ಲೋಟ ಮತ್ತೆ ಜೋಡಣೆಯಾಗುತ್ತದೆಯೇ? ಅದೇನಿದ್ದರೂ ನೀವು ಮತ್ತೊಬ್ಬರ ಮೇಲೆ ರೇಗಾಡಿಕೊಂಡು ಒಂದು ರೀತಿಯ ಸಮಾಧಾನವನ್ನು ನಿಮ್ಮೊಳಗೆ ತಂದುಕೊಳ್ಳುವುದಾಗಿದೆ ಅಲ್ಲವೇ? ನೀವು ಕೆಲಸದವಳಿಗೆ ಕೇವಲ ರೇಗಾಡಿರುವುದು ಮಾತ್ರವಲ್ಲ, ಅವಳ ಬಗ್ಗೆ ನಿಮ್ಮ ಮನಸ್ಸಿನಲ್ಲಿ ಕ್ಲೇಶ ಕೂಡಾ ಉತ್ಪನ್ನವಾಗುತ್ತದೆ. ಈವೊಂದು ವ್ಯವಹಾರದಲ್ಲಿ ಗಾಜಿನ ಲೋಟ ಒಡೆದು ಹೋಗಿರುವುದು ಒಂದು ಬಗೆಯ ನಷ್ಟವಾದರೆ, ಮನಸ್ಸಿನಲ್ಲಿ ಕ್ಲೇಶ ಉಂಟಾಗಿರುವುದು ಎರಡನೆಯ ನಷ್ಟ, ಜೊತೆಗೆ ಕೆಲಸದವಳೊಂದಿಗೆ ವೈರತ್ವ ಕಟ್ಟಿಕೊಳ್ಳುವುದು ಮೂರನೆಯ ನಷ್ಟ!!! 'ನಾನು ಬಡವಿಯಾದ್ದರಿಂದ ನನ್ನ ಮೇಲೆ ಮನೆಯ ಯಜಮಾನರು ಸಿಟ್ಟು ತೋರಿಸುತ್ತಿರುವುದಾಗಿದೆಯಲ್ಲವೇ?' ಎಂದು, ಮನೆಯ

ಕೆಲಸದವರು ನಿಮ್ಮೊಂದಿಗೆ ವೈರತ್ವವನ್ನು ಕಟ್ಟಿಕೊಳ್ಳುತ್ತಾರೆ. ಅಲ್ಲದೆ, ಈ ಪರಸ್ಪರ ವೈರತ್ವ ಎಂದೂ ಯಾರನ್ನೂ ಸುಮ್ಮನೆ ಬಿಡುವುದಿಲ್ಲ. ಸಂಸಾರದಿಂದ ಬಿಡಿಸಿಕೊಳ್ಳಲು ಸಾಧ್ಯವಿಲ್ಲ. ಹಾಗಾಗಿಯೇ ಭಗವಾನ್ ಮಹಾವೀರರು (ತೀರ್ಥಂಕರರು) ಹೇಳಿರುವುದು ಏನೆಂದರೆ, 'ಯಾರೊಂದಿಗೂ ವೈರತ್ವವನ್ನು ಕಟ್ಟಿಕೊಳ್ಳಲು ಹೋಗಬೇಡಿ. ಬದಲಿಗೆ ಪ್ರೇಮವನ್ನು ಬೆಳೆಸಿಕೊಳ್ಳಿ, ವೈರತ್ವ ಬೆಳೆಸಿಕೊಳ್ಳಲು ಹೋಗಬೇಡಿ.' ಎಂದು. ಯಾಕೆಂದರೆ, ಪ್ರೇಮದಿಂದ ಎಲ್ಲರೊಂದಿಗೆ ವ್ಯವಹರಿಸಿದಾಗ, ನಮ್ಮೊಳಗಿರುವ ವೈರತ್ವವನ್ನು ಪ್ರೇಮವು ಬುಡಮೇಲು ಮಾಡಿಬಿಡುತ್ತದೆ. ಪ್ರೇಮ ಅನ್ನುವುದು ವೈರತ್ವದ ಗೋರಿಯನ್ನೇ ಅಡಿಮೇಲು ಮಾಡಿ ನಾಶಮಾಡಿ ಬಿಡುವಂತಹದ್ದು. ಯಾರೊಂದಿಗೇ ಆಗಲಿ ವೈರತ್ವವನ್ನು ಇಟ್ಟುಕೊಂಡಷ್ಟು ಅದು ಹೆಚ್ಚು ಬೆಳೆದುಕೊಂಡು ಹೋಗುವುದು. ನಿರಂತರ ಹೆಚ್ಚುತ್ತಾ ಹೋಗುವುದು. ವೈರತ್ವದಿಂದಾಗಿಯೇ ಸಂಸಾರದಲ್ಲಿ ಅಲೆದಾಡಿಕೊಂಡಿರಬೇಕಾಗಿದೆ. 'ಯಾಕೆ ಇಷ್ಟೆಲ್ಲಾ ಮನುಷ್ಯರು ಅಲೆದಾಡಬೇಕಾಗಿದೆ? ಅವರಿಗೆ ತೀರ್ಥಂಕರರ ಸಂಪರ್ಕ ಇಲ್ಲಿಯವರೆಗೂ ಯಾಕೆ ಸಿಗಲಿಲ್ಲ?' ಎನ್ನುವ ಪ್ರಶ್ನೆ ಎಲ್ಲರಲ್ಲೂ ಉದ್ಭವಿಸಬಹುದು, ಅದಕ್ಕೆ ಉತ್ತರವೇನೆಂದರೆ, 'ಈ ಹಿಂದೆ ತೀರ್ಥಂಕರರ ಸಂಪರ್ಕ, ಸಾನಿಧ್ಯ ಎಲ್ಲವೂ ಪ್ರಾಪ್ತಿಯಾಗಿತ್ತು, ಅವರ ದಿವ್ಯ ವಾಣಿಯನ್ನು ಸಹ ಆಲಿಸಲಾಗಿತ್ತು. ಆದರೆ, ಅವರಿಂದ ತೋರಿಸಿ ಕೊಡಲಾಗಿದ್ದ ಮಾರ್ಗವನ್ನು ಜನರು ಅನುಸರಿಸಿ ಪ್ರಯೋಜನವನ್ನು ಪಡೆದುಕೊಳ್ಳಲು ಹೋಗಿಲ್ಲ.

ಈಗಲಾದರೂ ನಮಗೆ ಏನೆಲ್ಲಾ ಅಡಚಣೆಗಳು ಎದುರಾಗುತ್ತವೆ, ಯಾವ ಯಾವ ತೊಂದರೆಗಳು ಎದುರಾಗುತ್ತವೆ ಅವುಗಳ ಬಗ್ಗೆ ನಾವು ಸರಿಯಾದ ತಿಳುವಳಿಕೆಯನ್ನು ಪಡೆದುಕೊಂಡು, ಬಗೆಹರಿಸಿಕೊಳ್ಳಬೇಕು. ಅವೆಲ್ಲಾ ತೊಂದರೆಗಳಿಗೆ ನಾವು ಸಿಲುಕಲು ಕಾರಣ ನಮಗಿರುವ short-sight (ಅಲ್ಪ ದೃಷಿ). ಈಗ, ನಮಗೆ 'ಜ್ಞಾನಿ ಪುರುಷ'ರು long-sight (ದಿವ್ಯ ದೃಷ್ಟಿಯನ್ನು) ನೀಡುವುದರಿಂದ, ಆ ದಿವ್ಯ ದೃಷ್ಟಿಯ ಆಧಾರದಿಂದ ಜಗತ್ತಿನ ವಾಸ್ತವಿಕತೆ 'ಹೇಗಿದೆಯೋ ಹಾಗೆ' ನಮಗೆ ಕಂಡುಕೊಳ್ಳಲು ಸಾಧ್ಯವಾಗುವುದು!

## ಮಕ್ಕಳ ಮೇಲೆ ಕೋಪ ಬಂದರೆ, ಆಗೇನು...?

**ಪ್ರಶ್ನಕರ್ತ:** ಮನೆಯಲ್ಲಿ ಮಕ್ಕಳ ಮೇಲೆ ಕ್ರೋಧ ಉಂಟಾಗುವಾಗ ಏನು ಮಾಡಬೇಕು?

**ದಾದಾಶ್ರೀ:** ಮಕ್ಕಳ ಮೇಲೆ ಕ್ರೋಧಗೊಳ್ಳಲು ಕಾರಣ, ನಿಮಗೆ ತಿಳುವಳಿಕೆಯ ಕೊರತೆ ಇರುವುದರಿಂದ ಕ್ರೋಧ ಉಂಟಾಗುವುದು. ನಿಮ್ಮ ಮಗನನ್ನು ಕೇಳಿ, 'ನೀವು ಸಿಟ್ಟುಮಾಡಿದರೆ ಅವನಿಗೆ ಖುಷಿ ಕೊಡುತ್ತದೆಯೇ?' ಎಂದು, ಆಗ ಅವನು ಹೇಳುತ್ತಾನೆ, 'ಬಹಳ ಬೇಸರವಾಗುತ್ತದೆ, ನನಗೆ ಬಹಳ ದುಃಖ ಉಂಟಾಗುತ್ತದೆ.' ಎಂದು. ನಿಮ್ಮ ಕ್ರೋಧದಿಂದಾಗಿ ಅವನಿಗೂ ದುಃಖ ಹಾಗೂ ನಿಮಗೂ ದುಃಖ! ಇಬ್ಬರಿಗೂ ದುಃಖ ಉಂಟಾಗುವುದಾದರೆ, ಮಕ್ಕಳ ಮೇಲೆ ಸಿಡುಕ ಬೇಕಾಗಿರುವ ಅಗತ್ಯವಾದರೂ ಏನಿದೆ? ಸಿಡುಕುವುದರಿಂದ ಅವರಲ್ಲಿ ಸುಧಾರಣೆಯನ್ನು ನೀವು ತರಲು ಸಾಧ್ಯವಾಗುವುದಿದ್ದರೆ ಸಿಡುಕಬೇಕು. ನೀವು ಸಿಡುಕುವುದರಿಂದ ಒಳ್ಳೆಯ result (ಪರಿಣಾಮ) ಮಕ್ಕಳಲ್ಲಿ ನಿಮಗೆ ಕಂಡುಬರುವಂತಿದ್ದರೆ ಸಿಡುಕಬೇಕು. ಒಳ್ಳೆಯ ಫಲಿತಾಂಶ ಮಕ್ಕಳಲ್ಲಿ ಕಂಡುಬರದಿರುವಾಗ, ಸಿಡುಕುವುದರಲ್ಲಿ ಅರ್ಥವಿಲ್ಲ! ಕ್ರೋಧಗೊಳ್ಳುವುದರಿಂದ ಲಾಭವಿದ್ದರೆ ಕ್ರೋಧಗೊಳ್ಳಬೇಕು. ಕ್ರೋಧದಿಂದ ಲಾಭವೇ ಇಲ್ಲವೆಂದ ಮೇಲೆ, ನಾವು ಕ್ರೋಧಗೊಳ್ಳದಂತೆ ಹೇಗೆ ನಡೆಸಲು ಸಾಧ್ಯವಾಗುವುದೋ ಹಾಗೆ ನಡೆಸಿಕೊಂಡು ಹೋಗಲು ನೋಡಬೇಕು!

**ಪ್ರಶ್ನಕರ್ತ:** ನಾವು ಕ್ರೋಧಗೊಳ್ಳದೆ ಹೋದರೆ, ನಮ್ಮ ಮಾತನ್ನು ಕೇಳುವುದೇ ಇಲ್ಲ, ಸರಿಯಾಗಿ ಊಟ ಕೂಡಾ ಮಾಡುವುದಿಲ್ಲ.

**ದಾದಾಶ್ರೀ:** ನೀವು ಕ್ರೋಧಗೊಂಡಾಕ್ಷಣ ಅವರೇನು ನಿಮ್ಮ ಮಾತನ್ನು ಕೇಳುತ್ತಾರೆಯೇ?

## ವಿತರಾಗಿಗಳ (ತೀರ್ಥಂಕರರ) ಸೂಕ್ಷ್ಮತೆಯನ್ನು ಗಮನಿಸಿ!

ಕ್ರೋಧಗೊಂಡ ಅಪ್ಪನನ್ನು ನೋಡಿದಾಗ ಸಾಮಾನ್ಯವಾಗಿ ಜನರು ಕೂಡಾ ಹೇಳುತ್ತಾರೆ, 'ಮಗನ ಮೇಲೆ ಅಪ್ಪ ಎಷ್ಟೊಂದು ಸಿಟ್ಟು ಮಾಡುತ್ತಿದ್ದಾನೆ. ಅವನು

ಅಪ್ಪನೆಂದು ಹೇಳಿಸಿಕೊಳ್ಳಲು ಅರ್ಹನೇ ಅಲ್ಲ.' ಎಂದು. ಆದರೆ, ಪ್ರಾಕೃತಿಕ ನಿಯಮದ ಪ್ರಕಾರ, ಅಪ್ಪನಿಗೇನು ನ್ಯಾಯ ಸಿಗುವುದು?! ಅಪ್ಪನ ಪಾಲಿಗೆ ಪುಣ್ಯ ಕಟ್ಟಿಕೊಳ್ಳುತ್ತಾನೆ. ಅಪ್ಪ, ಮಕ್ಕಳ ಮೇಲೆ ಕ್ರೋಧಗೊಂಡರೂ ಸಹ, ಅವನಿಗೆ ಪುಣ್ಯ ಸಿಗುವುದು ಹೇಗೆ? ಎಂಬ ಪ್ರಶ್ನೆ ಎಲ್ಲರಿಗೂ ಉದ್ಭವಿಸುತ್ತದೆ. ಆದರೆ, ಅದು ನಿಜ. ಅಪ್ಪನಿಗೆ ಪುಣ್ಯ ಸಿಗುವುದು! ಯಾಕೆಂದರೆ, ಮಕ್ಕಳ ಹಿತಕ್ಕಾಗಿ ಅಪ್ಪನಿಗೆ ಮಕ್ಕಳ ಮೇಲೆ ಕ್ರೋಧವನ್ನು ವ್ಯಕ್ತಪಡಿಸಬೇಕಾಗಿ ಬಂದಾಗ, ಹಾಗೆ ವರ್ತಿಸಲು ಅಪ್ಪನಿಗೆ ಇಷ್ಟವಿಲ್ಲದಿದ್ದರೂ ಒಳಗೆ ಅಸಮಾಧಾನದ ಸಂಘರ್ಷಣೆಯೊಂದಿಗೆ ಮಕ್ಕಳ ಸುಖಕ್ಕಾಗಿ, ಅವರ ಒಳಿತಿಗಾಗಿ ಕ್ರೋಧಗೊಂಡು ವರ್ತಿಸುವುದಾಗಿದೆ. ಅವನೊಳಗೆ ಇಷ್ಟವಿಲ್ಲದಿರುವ ವರ್ತನೆಗೆ ಅಪ್ಪ ಒಳಗಾಗಿರುವುದರಿಂದ ಪುಣ್ಯ ಕಟ್ಟಿಕೊಳ್ಳುತ್ತಾನೆ! ಹಾಗಾಗಿ, ಈ ಒಂದು ವಿಚಾರದಲ್ಲಿ ಮಾತ್ರ ಕ್ರೋಧಗೊಂಡರೆ ತಪ್ಪಿಲ್ಲ. ಇನ್ನುಳಿದ ಬೇರೆಲ್ಲಾ ಬಗೆಯ ಕ್ರೋಧದಿಂದ ಪಾಪವನ್ನು ಮನುಷ್ಯ ಕಟ್ಟಿಕೊಳ್ಳುವುದೇ ಆಗಿದೆ. ಹಾಗೂ ಮತ್ತೊಂದು ಈ ಶಾಲಾ ಮಕ್ಕಳ ವಿಚಾರದಲ್ಲಿ ಅಥವಾ ಶಿಷ್ಯರ ಒಳಿತಿಗಾಗಿ ಗುರುಗಳು ತಮಗೆಷ್ಟೇ ತೊಂದರೆಯಾದರೂ, ಶಿಷ್ಯರ ಹಿತಕ್ಕಾಗಿಯೇ ಸದಾ ಕಾಲ ಯೋಚಿಸುತ್ತಾರೆ. ಹಾಗಾಗಿ, ಗುರುಗಳು ಕ್ರೋಧಗೊಂಡರೂ ಸಹ ಪುಣ್ಯ ಸಿಗುವುದು. ಆದರೆ, ಇತರರ ಹಿತಕ್ಕಾಗಿ ಕ್ರೋಧಗೊಂಡ ಗುರುಗಳ ಬಗ್ಗೆ ಜನರು ಅಗೌರವದಿಂದ ವರ್ತಿಸುವುದೇ ಆಗಿದೆ! ಆದರೆ, ಭಗವಂತ ಬಳಿ ಸರಿಯಾದ ನ್ಯಾಯ ಇದೆಯಲ್ಲವೇ? ಮನೆಯ ಯಜಮಾನ ತನ್ನ ಮಕ್ಕಳ ಮೇಲೆ, ಹೆಂಡತಿಯ ಮೇಲೆ ಕ್ರೋಧಗೊಂಡರೂ ಸಹ, ಹಿಂಸೆ ಕೊಡಬೇಕೆನ್ನುವ ಭಾವನೆ ಯಜಮಾನನಿಗೆ ಇಲ್ಲದಿರುವ ಕಾರಣ, ಅವನಿಗೆ ಪಾಪದ ಬಂಧನವಿಲ್ಲ. ಅದುಬಿಟ್ಟರೆ, ಬೇರೆ ಎಲ್ಲಾ ಕಡೆಯೂ ಮತ್ತೊಬ್ಬರಿಗೆ ಹಿಂಸೆ ನೀಡುವಂತಹ ಭಾವನೆಯನ್ನು ಒಳಗೊಂಡಿರುವಂತಹ ಕ್ರೋಧವೇ ಜನರಲ್ಲಿ ಇರುವುದು.

ಮತ್ತೊಂದು ವಿಚಾರವೇನೆಂದರೆ, ಯಾವುದೇ ಬಗೆಯ ಕ್ರೋಧವಾಗಿದ್ದರೂ, ಮತೊಬ್ಬರ ಮೇಲೆ ತನಗೆ ಹಿಂದೆ ಉಂಟಾಗಿದ್ದ ಕ್ರೋಧವನ್ನು ಮುಂದುವರಿಸಿಕೊಂಡು ಹೋಗುವುದು (ತಾಂತೋ) ಇದ್ದಾಗ, ಮನೆಯಲ್ಲಿ ಮಗಳನ್ನು ನೋಡುವಾಗಲೆಲ್ಲಾ ಅವಳ ಮೇಲೆ ಸಿಡಿಮಿಡಿಗೊಳ್ಳುವು ದರಿಂದ ಮತ್ತೊಬ್ಬರಿಗೆ ದುಃಖ ಉಂಟಾಗುವುದು. ಹಾಗಾಗಿ, ಕ್ರೋಧದಲ್ಲಿ ಮತ್ತೊಬ್ಬರಿಗೆ ಹಿಂಸೆ ಕೊಡುವಂತಹ ಭಾವನೆ ಹಾಗೂ ಹಿಂದೆ ಉಂಟಾಗಿದ್ದ

ಕ್ರೋಧವನ್ನು ಮುಂದುವರಿಸಿಕೊಂಡು ಹೋಗುವಂತಹದ್ದು, ಇವೆರಡೂ ಇಲ್ಲದೆ ಹೋದಾಗ ಮೋಕ್ಷ ಪ್ರಾಪ್ತಿಯಾಗುವುದು. ಯಾವಾಗ ಮತ್ತೊಬ್ಬರಿಗೆ ಹಿಂಸೆ ಕೊಡಬೇಕೆನ್ನುವ ಭಾವನೆ ಇರುವುದಿಲ್ಲ ಹಾಗೂ ಮತ್ತೊಬ್ಬರ ಮೇಲೆ ಹಿಂದೆ ಉಂಟಾಗಿದ್ದ ಕ್ರೋಧವನ್ನು ಬೆಳೆಸಿಕೊಂಡು ಹೋಗಲು ಇಚ್ಚಿಸುವುದಿಲ್ಲವೋ, ಆಗ ಮನುಷ್ಯ ಪುಣ್ಯವನ್ನು ಕಟ್ಟಿಕೊಳ್ಳಲಾಗುವುದು. ನೋಡಿ! ಎಷ್ಟು ಸೂಕ್ಷ್ಮದ ವಿಚಾರವನ್ನು ತೀರ್ಥಂಕರರು ಕಂಡುಕೊಂಡು, ನಮಗೆ ತೋರಿಸಿಕೊಟ್ಟಿದ್ದಾರೆ!

## ಕ್ರೋಧ ಮಾಡಿದರೂ ಸಹ ಪುಣ್ಯವನ್ನೇ ಕಟ್ಟಿಕೊಳ್ಳಲಾಗುವುದು!

ತೀರ್ಥಂಕರ ಭಗವಾನರು ಹೇಳಿರುವುದೇನೆಂದರೆ, 'ಯಾರೇ ಆಗಲಿ ಪರರ ಹಿತಕ್ಕಾಗಿ ಕ್ರೋಧಗೊಂಡರೆ, ಪರಮಾರ್ಥದ ಉದ್ದೇಶಕ್ಕಾಗಿ ಕ್ರೋಧಗೊಂಡರೆ, ಅದರ ಫಲವಾಗಿ ಅವರಿಗೆ ಪುಣ್ಯ ಪ್ರಾಪ್ತಿಯಾಗುವುದು.' ಎಂದು.

ಹಾಗಾಗಿಯೇ, ಕ್ರಮಿಕ್ (ಸಾಂಪ್ರದಾಯಕ) ಮಾರ್ಗದಲ್ಲಿ, ಗುರುಗಳಿಗೆ ಶಿಷ್ಯರು ಯಾವಾಗಲೂ ಹೆದರಿಕೊಂಡೇ ನಡೆಯುತ್ತಾರೆ. ಗುರುಗಳು, 'ಇದೇನು ಮಾಡಿದ್ದೀಯಾ? ಈಗೇನು ಮಾಡುತ್ತಿರುವೆ?' ಎಂದು, ಇಡೀ ದಿನ ಶಿಷ್ಯರ ಏಳಿಗೆಗಾಗಿ, ಶಿಷ್ಯರಿಗೆ ಜೋರು ಮಾಡುತ್ತಾ, ಗದರುತ್ತಲೇ ಇರುತ್ತಾರೆ. ಹೀಗೆಲ್ಲಾ ಗುರುಗಳು ಜೀವನವಿಡೀ ಶಿಷ್ಯರ ಹಿತ ಚಿಂತಕರಾಗಿಯೇ ಇದ್ದುಬಿಡುತ್ತಾರೆ. ಇದು ಆಧ್ಯಾತ್ಮಿಕ ಪ್ರಗತಿಯ ಹತ್ತನೆಯ ಗುಣಸ್ಥಾನದವರೆಗೂ ಇದೇ ರೀತಿ ಇರುವುದು! ಸಿಟ್ಟಿನಿಂದ ಗುರುಗಳು ಕಣ್ಣು ಕೆಂಪು ಮಾಡಿಕೊಂಡು, ಅವರೊಳಗೆ ಬಿಸಿ ರಕ್ತ ಕುದಿಯುವಷ್ಟು ಕೋಪ! ಬಹಳಷ್ಟು ಶಿಷ್ಯರ ಪ್ರಗತಿಗೋಸ್ಕರವೇ ಗುರುಗಳು ಬಳಲುತ್ತಲಿರುತ್ತಾರೆ. ಎಷ್ಟೊಂದು ಮತ್ತೊಬ್ಬರ ಹಿತಕ್ಕಾಗಿ ತಮ್ಮೊಳಗೆಯೇ ವೇದನೆಯನ್ನು ಅನುಭವಿಸುತ್ತಲಿರುತ್ತಾರೆ. ಹೀಗಿರುವಾಗ ಅವರಿಗೆ ಯಾವಾಗ ಅವರ ಅಂತಿಮ ಧ್ಯೇಯವನ್ನು ಪೂರ್ಣಗೊಳಿಸಿಕೊಳ್ಳಲು ಅವಕಾಶ ಸಿಗುವುದು? ಹಾಗಾಗಿಯೇ ಕ್ರಮಿಕ್ (ಸಾಂಪ್ರದಾಯಕ) ಮಾರ್ಗದಲ್ಲಿ, 'ಮೋಕ್ಷ ಹೊಂದುವುದೇನು ಲಡ್ಡು ತಿನ್ನುವಷ್ಟು ಸುಲಭದ ಮಕ್ಕಳಾಟವಲ್ಲ.'ವೆಂದು ಹೇಳಿರುವುದು. ಆದರೆ, ಬಹಳ ಅಪರೂಪಕ್ಕೆ ಯಾವಾಗಲೋ ಒಮ್ಮೆ ಈ ಅಕ್ರಮ-ವಿಜ್ಞಾನದ (ಯಾವುದೇ ಸಾಂಪ್ರದಾಯಕ

ಕಟ್ಟುಪಾಡಿಲ್ಲದ ವಿಜ್ಞಾನದ) ಮೂಲಕ ಮೋಕ್ಷ ಪ್ರಾಪ್ತಿಮಾಡಿಕೊಳ್ಳುವ ಅವಕಾಶ ದೊರಕುವುದು!

## ಕ್ರೋಧ, ಒಂದು ಬಗೆಯ Signal (ಸಂಕೇತ) ಆಗಿರಬೇಕು!

ಜಗತ್ತಿನ ಜನರು ಹೇಳುತ್ತಾರೆ, 'ಆ ವ್ಯಕ್ತಿ ಮಗನ ಮೇಲೆ ಕ್ರೋಧಗೊಳ್ಳುತ್ತಾನೆ. ಅವನು ಕ್ರೋಧಗೊಳ್ಳುವುದು ಸರಿಯಲ್ಲ. ಅದರಿಂದ ಅವನು ಪಾಪ ಕಟ್ಟಿಕೊಳ್ಳುತ್ತಾನೆ' ಎಂದು. ಆದರೆ, ಭಗವಾನರ ದೃಷ್ಟಿಯಲ್ಲಿ, ಅವರು ಹೇಳುವುದೇನೆಂದರೆ, 'ಮಗನ ಒಳಿತಿಗಾಗಿ, ಮಗನ ಮೇಲೆ ಕ್ರೋಧಗೊಳ್ಳದೆ ಸುಮ್ಮನಿದ್ದು ಬಿಟ್ಟರೆ, ಅದು ಅಪ್ಪನ ತಪ್ಪು. ಆದ್ದರಿಂದ ಅಪ್ಪನಿಗೆ ನೂರು ರೂಪಾಯಿಯ ಶಿಕ್ಷೆ ವಿಧಿಸಬೇಕು' ಎಂದು. ಹಾಗಾದರೆ, ಅಪ್ಪ ಮಗನ ಮೇಲೆ ಕ್ರೋಧಗೊಳ್ಳುವುದು ಸರಿಯೇ? ಎಂದು ಪ್ರಶ್ನಿಸಿದಾಗ, ಭಗವಾನರ ಹೇಳಿಕೆಯ ಪ್ರಕಾರ, 'ಕ್ರೋಧಗೊಳ್ಳುವುದು ಸರಿಯಲ್ಲ. ಆದರೆ, ಮಗ ತಪ್ಪು ದಾರಿ ಹಿಡಿಯುವ ಸಂದರ್ಭದಲ್ಲಿ ಕ್ರೋಧಗೊಳ್ಳಬೇಕಾದ ಅಗತ್ಯವಿದೆ. ಇಲ್ಲದೆ ಹೋದರೆ ಮಗ ತಪ್ಪು ದಾರಿ ಹಿಡಿಯುವನು.' ಎಂದು.

ಹಾಗಾಗಿ, ಈ ಕ್ರೋಧ ಅನ್ನುವುದು ಒಂದು ಪ್ರಕಾರದ ಎಚ್ಚರಿಕೆ ನೀಡುವಂತಹ ಕೆಂಪು signal (ಸಂಕೇತದ) ರೀತಿಯಲ್ಲಿ ಕೆಲವೊಂದು ಸಂದರ್ಭದಲ್ಲಿ ಇರಬೇಕೇ ಹೊರತು, ಮತ್ತೆಲ್ಲೂ ಅದರ ಉಪಯೋಗ ಬೇಕಿಲ್ಲ. ಕೆಲವೊಂದು ಕಡೆ ಅಪ್ಪ ಮಕ್ಕಳ ಮುಂದೆ ಸಿಟ್ಟಿನಿಂದ ಕಣ್ಣು ದೊಡ್ಡದಾಗಿಸದೇ ಹೋದರೆ, ಕ್ರೋಧಗೊಳ್ಳದೇ ಹೋದರೆ, ಆಗ ಮಕ್ಕಳು ತಪ್ಪು ದಾರಿ ಹಿಡಿಯುತ್ತಾರೆ. ಹಾಗಾಗಿಯೇ ಭಗವಾನರು, 'ಮಕ್ಕಳ ಮೇಲೆ ಅಪ್ಪ ಕ್ರೋಧಗೊಂಡರೂ, ಅವರಿಗೆ ನೂರು ರೂಪಾಯಿಯ ಬಹುಮಾನ ನೀಡಬೇಕೆಂದು' ಹೇಳಿರುವುದು.

ಕೆಲವೊಂದು ಸಂದರ್ಭದಲ್ಲಿ ಈ ಕ್ರೋಧ ಒಂದು ರೀತಿ ಎಚ್ಚರಿಸುವಂತಹ ಕೆಂಪು ಬಾವುಟವಾಗಿದೆ. ಇದು ಜನರಿಗೆ ತಿಳಿದಿಲ್ಲ. ಹಾಗೂ ಯಾವಾಗ, ಎಷ್ಟು ಸಮಯದವರೆಗೆ ಕೆಂಪು ಬಾವುಟವನ್ನು ಹಿಡಿದು ನಿಲ್ಲಬೇಕೆನ್ನುವ ತಿಳುವಳಿಕೆ ಇರಬೇಕಾಗಿರುವುದು ಬಹಳ ಅಗತ್ಯ. ಈಗ Mail (ಅಂಚೆ ಹೊತ್ತ) ರೈಲುಗಾಡಿ ಹೋಗುವಾಗ, ಸುಮ್ಮನೆ ಗಂಟೆಗಟ್ಟಲೆ ಕೆಂಪು ಬಾವುಟ ಹಿಡಿದು ನಿಂತುಕೊಂಡೇ ಇದ್ದರೆ

ಏನಾಗುವುದು? ಅಲ್ಲಿ ಕೆಂಪು signal ತೋರಿಸಬೇಕಾದ ಅಗತ್ಯವಿದೆ ಯೇ? ಯಾವಾಗ ಎಷ್ಟು ಸಮಯದವರೆಗೆ ತೋರಿಸಬೇಕೆನ್ನುವ ತಿಳುವಳಿಕೆ ಇರಬೇಕಾಗಿರುವುದು ಬಹಳ ಮುಖ್ಯ.

ಸಮಾಧಾನದಿಂದ ವರ್ತಿಸುವುದು ಹಸಿರು ಬಾವುಟದ ಸಂಕೇತದ ಹಾಗೆಂದು ಹೇಳಬಹುದು!

## ರೌದ್ರಧ್ಯಾನವಾಗಿದ್ದರೂ ಪರಿಣಮಿಸುವುದು ಧರ್ಮಧ್ಯಾನವಾಗಿ!

ಮಕ್ಕಳ ಮೇಲೆ ಕ್ರೋಧಗೊಂಡರೂ ನಿಮ್ಮೊಳಗಿನ ಭಾವನೆಯಲ್ಲಿ, 'ಹಾಗೆಲ್ಲಾ ವರ್ತಿಸಬಾರದು.' ಎನ್ನುವುದು ಇರಬೇಕು. ಈಗ ನಿಮ್ಮೊಳಗಿರುವ ಭಾವನೆ ಏನು?

**ಪ್ರಶ್ನಕರ್ತ:** ಹಾಗೆಲ್ಲಾ ಕ್ರೋಧಗೊಂಡು ವರ್ತಿಸುವುದು ಸರಿಯಲ್ಲವೆಂದು ಅನ್ನಿಸುತ್ತದೆ.

**ದಾದಾಶ್ರೀ:** ಹಾಗಿದ್ದರೆ, ಆಗ ನೀವು ಮತ್ತೊಬ್ಬರ ಮೇಲೆ ತೋರಿಸುವ ಕ್ರೋಧವು ರೌದ್ರಧ್ಯಾನವಾಗಿದ್ದರೂ, ನಿಮ್ಮೊಳಗಿನ ಭಾವನೆಯಲ್ಲಿ ಹಾಗೆ ಮಾಡುವುದು ಸರಿಯಲ್ಲವೆಂದು ಅನ್ನಿಸುವುದರಿಂದ ಧರ್ಮಧ್ಯಾನವಾಗಿ ಪರಿಣಮಿಸುವುದು. ನಿಮಗೆ ಕ್ರೋಧ ಉಂಟಾಗಿದ್ದರೂ ಸಹ ಧರ್ಮಧ್ಯಾನದ ಪರಿಣಾಮವನ್ನು ನೀವು ಪಡೆಯಲಾಗುವುದು.

**ಪ್ರಶ್ನಕರ್ತ:** ಅದು, 'ಕ್ರೋಧದಿಂದ ವರ್ತಿಸುವುದು ಸರಿಯಲ್ಲ.' ಎನ್ನುವ ಭಾವನೆ ನಮ್ಮೊಳಗೆ ಇರುವುದರಿಂದ ಧರ್ಮಧ್ಯಾನದ ಪರಿಣಾಮವನ್ನು ಪಡೆಯಲಾಗುವುದು ಅಲ್ಲವೇ?

**ದಾದಾಶ್ರೀ:** ಹೌದು. ನೀವು ಮಕ್ಕಳ ಮೇಲೆ ತೋರಿಸುತ್ತಿರುವ ಕ್ರೋಧದ ಹಿಂದೆ, ಮಕ್ಕಳಿಗೆ ಹಿಂಸಿಸಬೇಕೆನ್ನುವ ಭಾವನೆ ನಿಮಗೆ ಇರುವುದಿಲ್ಲ. ಹೆಚ್ಚಾಗಿ ಜಗತ್ತಿನ ಜನರಲ್ಲಿ ಹಿಂಸಾತ್ಮಕ ಭಾವನೆ ಇಲ್ಲದಿರುವಂತಹ ಕ್ರೋಧ ಇರಲು ಸಾಧ್ಯವೇ ಇಲ್ಲ. ಆದರೆ, ಈವೊಂದು ವಿಚಾರದಲ್ಲಿ ಮತ್ತೊಬ್ಬರ ಹಿತಕ್ಕಾಗಿ ಮಕ್ಕಳ ಮೇಲೆ, ಸ್ನೇಹಿತರ ಮೇಲೆ, ಹೆಂಡತಿಯ ಮೇಲೆ ಕ್ರೋಧಗೊಂಡರೂ, ಪುಣ್ಯವನ್ನೇ ಆತನು ಕಟ್ಟಿಕೊಳ್ಳುವನು.

ಕಾರಣವೇನೆಂದರೆ ಅಲ್ಲಿ ಗಮನಿಸಲಾಗುತ್ತದೆ, 'ಆತನ ಕ್ರೋಧದ ಹಿಂದಿರುವ ಉದ್ದೇಶ ಏನು?' ಎಂದು.

**ಪ್ರಶ್ನಕರ್ತ:** ಅಂದರೆ, ಅದು ಪ್ರಶಸ್ತ (ಪ್ರಶಂಸನೀಯ) ಕ್ರೋಧವಾಗಿದೆಯೇ?

**ದಾದಾಶ್ರೀ:** ಹೌದು. ಹಾಗೂ ಹಿಂಸೆ ನೀಡಬೇಕೆನ್ನುವ ಭಾವನೆಯುಳ್ಳ ಕ್ರೋಧವು ಅಪ್ರಶಸ್ತ (ಅಪ್ರಶಂಸನೀಯ) ಕ್ರೋಧವಾಗಿದೆ.

ಹಾಗಾಗಿ, ಹಿಂಸೆಯ ಭಾವನೆ ಇಲ್ಲದಿರುವ ಕ್ರೋಧವನ್ನು ಮಾತ್ರ ಮತ್ತೊಂದು ರೀತಿಯಿಂದ ಪ್ರಶಂಸನೀಯವಾಗಿದೆ. ಅದನ್ನು ಬಿಟ್ಟು, ಹಣದ ವಿಚಾರವಾಗಿ ಮಗನನ್ನು ಬಾಯಿಗೆ ಬಂದಂತೆ ಬಯ್ಯುವುದು, 'ನಿನಗೆ ವ್ಯಾಪಾರದ ಮೇಲೆ ಸರಿಯಾದ ಗಮನವಿಲ್ಲ.' ಎಂದು ಕ್ರೋಧಗೊಂಡು, ಅವನಿಗೆ ಹಿಂಸೆ, ದುಃಖ ನೀಡುವಂತದ್ದಾಗಿದೆ. ಆದರೆ, ಮಗನಲ್ಲಿ ಒಳ್ಳೆಯ ಸಂಸ್ಕಾರವನ್ನು ತರಲು, ಅವನು ಕಳ್ಳತನ ಮಾಡುವುದಾಗಲಿ ಅಥವಾ ಬೇರೆ ಬಗೆಯ ಅಡ್ಡ ದಾರಿ ಹಿಡಿದಿರುವುದಾಗಲಿ ಕಂಡುಬಂದಾಗ, ಮಗನ ಮೇಲೆ ಕ್ರೋಧಗೊಳ್ಳುವುದರ ಫಲ ಪುಣ್ಯವೆಂದು ಭಗವಾನರು ಹೇಳಿದ್ದಾರೆ. ನೋಡಿ! ಭಗವಾನರು (ತೀರ್ಥಂಕರರು) ಎಷ್ಟು ವಿವೇಕವಂತರು!

## ವಿವೇಕವುಳ್ಳವರು ಕ್ರೋಧವನ್ನು ತಪ್ಪಿಸುವರು!

**ಪ್ರಶ್ನಕರ್ತ:** ಕ್ರೋಧವನ್ನು ನಾವು office ನಲ್ಲಾಗಲಿ ಅಥವಾ ನಮ್ಮ secretary ಮೇಲಾಗಲಿ ತೋರಿಸಲು ಹೋಗುವುದಿಲ್ಲ ಅಥವಾ hospital nurse ಮೇಲೆ ತೋರಿಸಲು ಹೋಗುವುದಿಲ್ಲ. ಮನೆಯಲ್ಲಿ ಹೆಂಡತಿಯ ಮೇಲೆಯೇ ಮಾತ್ರ ಹೆಚ್ಚು ಕ್ರೋಧಗೊಳ್ಳಲಾಗುತ್ತದೆ.

**ದಾದಾಶ್ರೀ:** ಅದರ ಬಗ್ಗೆಯೇ, ಇಲ್ಲಿ ಕುಳಿತಿರುವ ನಿಮ್ಮೆಲ್ಲರಿಗೂ ನಾನು ಹೇಳುತ್ತಿರುವುದು. ಆಫೀಸ್ ನಲ್ಲಿ ನಿಮಗೆ ಮೇಲಧಿಕಾರಿಗಳು ಗದರಿಸಲಾಗಿದ್ದರೆ ಅಥವಾ ಹೊರಗೆ ಬೇರೆ ಯಾರಾದರು ನಿಮ್ಮೊಂದಿಗೆ ಜಗಳವಾಡಲಾಗಿದ್ದರೆ, ಆ ಸಿಟ್ಟನ್ನು ತೆಗೆದುಕೊಂಡು ಬಂದು ಮನೆಯಲ್ಲಿ ಹೆಂಡತಿಯ ಮುಂದೆ ತೋರಿಸುವುದಾಗಿದೆ. ಹಾಗಾಗಿಯೇ ನಾನು ಎಲ್ಲರಿಗೂ ಹೇಳುವುದು, 'ಅಯ್ಯೋ ಮೂರ್ಖ ಜನರು! ಬಡಪಾಯಿ

ಹೆಂಡತಿ ಏನು ತಪ್ಪು ಮಾಡಿದ್ದಾಳೆ? ಸುಮ್ಮನೆ ಯಾಕೆ ಅವಳಿಗೆ ರೇಗಬೇಕು? ಹೊರಗೆ ನಿಮ್ಮನ್ನು ಜೋರು ಮಾಡುವವರೊಂದಿಗೆ ನೀವು ಜಗಳವಾಡಬೇಕೇ ಹೊರತು, ಮನೆಯಲ್ಲಿ ಯಾಕೆ ಆ ಬಡಪಾಯಿಯೊಂದಿಗೆ ಜಗಳವಾಡಬೇಕು?

ನಮ್ಮ ಪರಿಚಯದ ಒಬ್ಬ ವಿವೇಕವುಳ್ಳ ವ್ಯಕ್ತಿ, ಯಾವಾಗಲೂ ನನ್ನನ್ನು, 'ತಾವು ಒಮ್ಮೆ ನಮ್ಮ ಮನೆಗೆ ಬರಬೇಕು.'ಎಂದು ಕರೆಯುತ್ತಲೇ ಇರುತ್ತಿದ್ದ. ಅವನು ಕಟ್ಟಡಗಳ ಮೇಸ್ತ್ರಿ ಕೆಲಸ ಮಾಡುವವನು. ಒಮ್ಮೆ, ನಾನು ಹಾದಿಯಲ್ಲಿ ಹೋಗುವಾಗ ಅವನು ನನ್ನನ್ನು ನೋಡಿ, 'ಬನ್ನಿ ಮನೆಗೆ ಹೋಗೋಣ' ಎಂದ. ಆಗ ನಾನು ಅವನೊಂದಿಗೆ ಅವನ ಮನೆಗೆ ಹೋದಾಗ, ಅವನ ಮನೆ ನೋಡಿ ನಾನು ಅವನಿಗೆ ಕೇಳಿದೆ, 'ಕೇವಲ ಎರಡೇ ಕೊಠಡಿಯುಳ್ಳ ಮನೆಯಲ್ಲಿ ನೀನು ಹೇಗೆ ಜೀವನ ಮಾಡುತ್ತಿದ್ದೀಯಾ? ಎಂದು. ಅದಕ್ಕೆ ಅವನು, 'ನಾನು ಒಬ್ಬ ಸಾಮಾನ್ಯ ಮೇಸ್ತ್ರಿ ಅಲ್ಲವೇ! ಎಂದು ಹೇಳಿದ. ಇದು, ನಮ್ಮ ಕಾಲದ ಮಾತು. ಈಗಿನ ದುಬಗೆಯ ಕಾಲದಲ್ಲಿ ಒಂದೇ ಕೊಠಡಿಯಲ್ಲಿ ಜೀವನ ಸಾಗಿಸಬೇಕಾಗಿದೆ. ಆದರೆ, ಹಿಂದಿನ ಕಾಲ ಚೆನ್ನಾಗಿತ್ತು. ಮೇಸ್ತ್ರಿಯಾಗಿದ್ದರೂ ಎರಡು ಕೊಠಡಿಯುಳ್ಳ ಮನೆಯಲ್ಲಿ ವಾಸ ಮಾಡಬಹುದಾಗಿತ್ತು! ನಾನು ಅವನಿಗೆ ಕೇಳಿದೆ, 'ನಿನ್ನ ಹೆಂಡತಿ ದೊಡ್ಡ ಮನೆ ಬೇಕೆಂದು ಗಲಾಟೆ ಮಾಡುವುದಿಲ್ಲವೇ, ಕೋಪಿಸಿಕೊಳ್ಳುವುದಿಲ್ಲವೇ?' ಅದಕ್ಕೆ ಅವನು ಹೇಳಿದ, 'ನನ್ನ ಹೆಂಡತಿ ಕೋಪಗೊಳ್ಳುತ್ತಾಳೆ. ಆದರೆ, ನಾನು ಮಾತ್ರ ಕೋಪಿಸಿಕೊಳ್ಳುವುದಿಲ್ಲ.' ಎಂದ, ಮತ್ತೆ ನಾನು ಪ್ರಶ್ನಿಸಿದೆ, 'ಯಾಕೆ ಹಾಗೆ?' ಅದಕ್ಕೆ ಅವನು ಉತ್ತರಿಸಿದ, 'ಅವಳೂ ಸಿಟ್ಟುಮಾಡಿಕೊಂಡು ಜೊತೆಗೆ ನಾನೂ ಸಿಟ್ಟುಮಾಡಿಕೊಂಡರೆ, ಆಗ ನಾವಿರುವ ಎರಡು ಕೊಠಡಿಯ ಮನೆಯಲ್ಲಿ ಕೋಪಗೊಂಡು ಅವಳು ಹೋಗಿ ಮಲುಗುವುದಾದರೂ ಎಲ್ಲಿ ಹಾಗೂ ನಾನು ಮಲುಗುವುದು ಎಲ್ಲಿ? ಮಲುಗುವ ಕೊಠಡಿ ಒಂದೇ ಇರುವಾಗ, ಅವಳೊಂದು ಮೂಲೆಗೆ ತಿರುಗಿ ಮಲಗಬೇಕು, ನಾನೊಂದು ಮೂಲೆಗೆ ತಿರುಗಿಕೊಂಡು ಮಲಗಬೇಕು. ಅಲ್ಲದೆ, ಬೆಳಿಗ್ಗೆ ಎದ್ದ ಕೂಡಲೇ ನನಗೆ ಕುಡಿಯಲು ಚಹಾ ಕೂಡಾ ಸಿಗುವುದಿಲ್ಲ. ಅವಳಿಂದಲೇ ಸುಖ, ಅವಳಿಂದಾಗಿಯೇ ನಾನು ಸುಖವಾಗಿರುವುದು! ಎನ್ನುವಾಗ, ನಾನು ಅವನಿಗೆ ಕೇಳಿದೆ, 'ಎಂದಾದರೂ ನಿನ್ನ ಹೆಂಡತಿ ಸಿಟ್ಟು ಮಾಡಿಕೊಂಡರೇನು ಮಾಡುತ್ತೀಯಾ?'ಎಂದು. ಅದಕ್ಕೆ ಅವನು ಹೇಳಿದ, 'ನಾನು ಅವಳನ್ನು ಹೇಗಾದರೂ ಮಾಡಿ ಸಮಾಧಾನ ಪಡಿಸುತ್ತೇನೆ. 'ಸಿಟ್ಟು ಯಾಕಮ್ಮ?

ಬಿಟ್ಟುಬಿಡು. ನನ್ನ ಪರಿಸ್ಥಿತಿ ನನಗೆ ಗೊತ್ತು.' ಎಂದು ಹೇಳಿ, ಅವಳಿಗೆ ಸಮಾಧಾನ ಪಡಿಸುತ್ತೇನೆ. ಅವಳು ಸಂತೋಷವಾಗಿರುವಂತೆ ನೋಡಿಕೊಳ್ಳುತ್ತೇನೆ. ಬೇಕಿದ್ದರೆ ಹೊರಗೆ ಜನರೊಂದಿಗೆ, ಬೇರೆಯವರೊಂದಿಗೆ ಹೊಡೆದಾಡಿಕೊಂಡು ಮನೆಗೆ ಬರುತ್ತೇನೆ. ಆದರೆ, ಮಡದಿಯ ಮೇಲೆ ಎಂದೂ ಕೈಮಾಡುವುದಿಲ್ಲ.' ಎನ್ನುತ್ತಾನೆ. ಅದೇ ವಿವೇಕವಿಲ್ಲದ ಜನರು ಬೇರೆಯವರಿಂದ ಹೊಡೆತ ತಿಂದುಕೊಂಡು ಬಂದು, ಮನೆಯಲ್ಲಿ ಹೆಂಡತಿಯ ಮೇಲೆ ಕೈಮಾಡಲು ಹೋಗುತ್ತಾರೆ.

ಜಗತ್ತಿನಲ್ಲಿ ಸಾಮಾನ್ಯವಾಗಿ ಜನರು ಕ್ರೋಧಗೊಂಡೇ ಇಡೀ ದಿನ ಎಲ್ಲರೊಂದಿಗೆ ವರ್ತಿಸುತ್ತಾರೆ. ಅಂತಹ ಮನುಷ್ಯರಿಗಿಂತ ಹಸು-ಎಮ್ಮೆಗಳೇ ಉತ್ತಮ, ಅವುಗಳು ಕ್ರೋಧಗೊಳ್ಳುವುದೇ ಇಲ್ಲ. ಹೇಗೋ ಅನುಸರಿಸಿಕೊಂಡು ಶಾಂತಿಯಿಂದ ಜೀವಿಸಲು ನಾವು ನೋಡಬೇಕಲ್ಲವೇ? ದೌರ್ಬಲ್ಯ ತುಂಬಿಕೊಂಡಿರುವಂತಹ ಜೀವನ ನಮ್ಮದಾಗಬಾರದು. ದೌರ್ಬಲ್ಯದಿಂದಾಗಿ ನಿಮಗೆ ಆಗಾಗ ಕ್ರೋಧ ಉಂಟಾಗಲು ಕಾರಣ! ಇಲ್ಲಿಗೆ ಸತ್ಸಂಗಕ್ಕಾಗಿ ನೀವು ಯಾವಾಗಲೂ ಕಾರಿನಲ್ಲಿ ಬರುತ್ತೀರಿ ಅಲ್ಲವೇ? ಎಂದಾದರೂ ನಿಮ್ಮ ಕಾರಿನ ಎಂಜಿನ್ ಬಿಸಿಯಾಗಿ ಮಧ್ಯ ದಾರಿಯಲ್ಲಿ ನಿಂತುಹೋದರೆ ಬರಲು ಸಾಧ್ಯವಾಗುವುದೇ?

**ಪ್ರಶ್ನಕರ್ತ:** ಆಗ ಬರಲು ಸಾಧ್ಯವಾಗುವುದಿಲ್ಲ.

**ದಾದಾಶ್ರೀ:** ಅದೇ ರೀತಿ, ನೀವು ಹೆಂಡತಿಯ ಮೇಲೆ ಕ್ರೋಧಗೊಂಡು ಬಿಸಿಯಾದರೆ ಹೇಗೆ ನಿಮ್ಮ ಸಂಸಾರದ ಗಾಡಿ ನಡೆಯಲು ಸಾಧ್ಯ? ಆದರೆ, ನೀವು ಹಾಗೆಲ್ಲ ಎಂದೂ ಹೆಂಡತಿಯ ಮೇಲೆ ಕ್ರೋಧಗೊಳ್ಳುವವರಲ್ಲವೆಂದು ನಾನು ಅಂದುಕೊಳ್ಳುತ್ತೇನೆ.

**ಪ್ರಶ್ನಕರ್ತ:** ಇಲ್ಲ. ಕೆಲವೊಮ್ಮೆ ಅವಳ ಮೇಲೆ ಕ್ರೋಧಗೊಳ್ಳುವುದಿದೆ.

**ದಾದಾಶ್ರೀ:** ನೋಡಿ.., ಇಬ್ಬರಿಗೂ ಕ್ರೋಧ ಉಂಟಾದರೆ, ನಂತರ ಮನೆಯಲ್ಲಿ ಇರುವುದಾದರೂ ಹೇಗೆ?

**ಪ್ರಶ್ನಕರ್ತ:** ಆದರೆ, ಪತಿ-ಪತ್ನಿ ನಡುವೆ ಸ್ವಲ್ಪ ಮಟ್ಟಿಗಿನ ಕೋಪ-ತಾಪ ಇರಬೇಕಲ್ಲವೇ?

**ದಾದಾಶ್ರೀ:** ಇಲ್ಲ. ಅಂತಹ ಕಾನೂನು ಎಲ್ಲೂ ಇಲ್ಲ. ನಿಜವಾಗಿ, ಪತಿ-ಪತ್ನಿಯ ನಡುವೆ ಹೆಚ್ಚಿನ ನೆಮ್ಮದಿ ಇರಬೇಕು. ಇಬ್ಬರ ನಡುವೆ ದುಃಖ ಉಂಟಾಗುವುದಾದರೆ ಅವರಿಬ್ಬರು ಪತಿ-ಪತ್ನಿಯೇ ಅಲ್ಲ! ನಿಜವಾದ ಗೆಳೆತನದಲ್ಲಿ ದುಃಖ ಅನ್ನುವುದೇ ಇರುವುದಿಲ್ಲವೆಂದ ಮೇಲೆ, ಇನ್ನು ಪತಿ-ಪತ್ನಿ ಸಂಬಂಧ ಗೆಳೆತನಕ್ಕಿಂತಲೂ ಹೆಚ್ಚು. ಇಬ್ಬರೂ ದೀರ್ಘಕಾಲ ಜೀವನದ ಸಂಗಾತಿಗಳು! ಇಬ್ಬರ ನಡುವೆ 'ಕ್ರೋಧ' ಇರಲೇ ಬಾರದು. ಲೋಕದ ಜನರು ಸುಮ್ಮನೆ ವಿವೇಕವಿಲ್ಲದ ವಿಚಾರಗಳನ್ನು ಬೇರೆಯವರ ತಲೆಗೆ ತುಂಬಿಸುತ್ತಾರೆ. ಸ್ವತಃ ಅವರ ಮನೆಗಳಲ್ಲಿ ಪ್ರತಿನಿತ್ಯ ಪತಿ-ಪತ್ನಿಯ ನಡುವೆ ಕ್ರೋಧ ಉಂಟಾಗುತ್ತಲೇ ಇರುವುದರಿಂದ, ಜನರು ಅದನ್ನೇ ಒಂದು ಕಾನೂನು ಮಾಡಿಕೊಂಡು ಎಲ್ಲರಿಗೂ ಹೇಳಿಕೊಡುತ್ತಾರೆ! ಪತಿ-ಪತ್ನಿಯ ನಡುವೆ ಎಂದಿಗೂ ದುಃಖ ಉಂಟಾಗಲೇ ಬಾರದು. ಬೇರೆಲ್ಲೇ ಉಂಟಾದರೂ ಪರವಾಗಿಲ್ಲ.

## ತನಗೆ ಬೇಕಾದ ಹಾಗೆಯೇ ನಡೆಯಬೇಕೆನ್ನುವುದು, ಒಂದು ಬಗೆಯ ದ್ರೋಹ!

**ಪ್ರಶ್ನಕರ್ತ:** ಮನೆಯಲ್ಲಾಗಲಿ ಅಥವಾ ಹೊರಗೆ ಸ್ನೇಹಿತರರೊಂದಿಗಾಗಲಿ ಪ್ರತಿಯೊಬ್ಬರ ಅಭಿಪ್ರಾಯವು ಬೇರೆ, ಬೇರೆಯೇ ಇರುವುದು. ಹಾಗಾಗಿ, ನಮಗೆ ಬೇಕಾದ ಹಾಗೆ ನಡೆಯುವುದಿಲ್ಲ. ಆಗ ನಮಗೆ ಕ್ರೋಧ ಬಂದುಬಿಡುತ್ತದೆ. ಯಾಕೆ ಹಾಗೆ? ಅದಕ್ಕೇನು ಮಾಡುವುದು?

**ದಾದಾಶ್ರೀ:** ಪ್ರತಿಯೊಬ್ಬ ವ್ಯಕ್ತಿ, ತನಗೆ ಬೇಕಾದ ಹಾಗೆಯೇ ನಡೆಸಬೇಕೆಂದು ಹೋದಾಗ, ಏನಾಗುವುದು? ಹಾಗೂ ತನ್ನಂತೆಯೇ ನಡೆಯಬೇಕೆನ್ನುವ ವಿಚಾರವು ಯಾಕೆ ಉಂಟಾಗುವುದು? ಅದರ ಬಗ್ಗೆ ನಾವು ಯೋಚಿಸಬೇಕು, ಮನೆಯಲ್ಲಿ ಎಲ್ಲರೂ ಅವರವರಿಗೆ ಬೇಕಾದ ಹಾಗೆಯೇ ನಡೆಸಬೇಕೆಂದು ಹೋದರೆ, ಆಗ ಪರಸ್ಪರ ಜಗಳ ಉಂಟಾಗಿ ನಂತರ ಮನೆಯಲ್ಲಿ ಎಲ್ಲರೂ ಉಪವಾಸ ಇರಬೇಕಾಗಿ ಬರುವುದು. ಹಾಗಾಗಿ, ಮೊಟ್ಟ ಮೊದಲು ತಾನು, ತನಗೆ ಬೇಕಾದ ಹಾಗೆ ನಡೆಯ ಬೇಕೆನ್ನುವಂತಹ

ವಿಚಾರ ಮಾಡಲು ಹೋಗಲೇ ಬಾರದು. ನಿಮ್ಮಂತೆಯೇ ನಡೆಯ ಬೇಕೆನ್ನುವಂತಹ ಹಠ ನೀವು ಹಿಡಿಯದಿದ್ದರೆ, ಆಗ ನಿಮ್ಮದೇನು ತಪ್ಪಿರುವುದಿಲ್ಲ. ಉಳಿದವರಿಗೆ ಹೇಗೆ ಬೇಕೋ ಹಾಗೆ, ಅವರಿಗೆ ಬೇಕಿರುವಂತೆ ನಡೆಸಲಿ ಎಂದು, ನೀವು ಇದ್ದುಬಿಡಬೇಕು.

**ಪ್ರಶ್ನಕರ್ತ;** ನಾನೆಷ್ಟೇ ಶಾಂತವಾಗಿರಲು ಪ್ರಯತ್ನಿಸಿದರೂ ಯಜಮಾನರು ಕ್ರೋಧಗೊಳ್ಳುವುದೇ ಆಗಿದೆ. ಅದಕ್ಕೇನು ಮಾಡುವುದು?

**ದಾದಾಶ್ರೀ:** ಅವರು ಕ್ರೋಧಗೊಂಡು ರೇಗಾಡುವಾಗ, ನಿಮಗೂ ಸಿಟ್ಟು ತೋರಿಸಬೇಕೆಂದಿದ್ದರೆ, ಅವರೊಂದಿಗೆ ನೀವು ಕೂಡಾ ಜಗಳಕ್ಕೆ ಮುಂದಾಗಿ ಅಥವಾ ನಿಮಗೆ ಜಗಳವಾಡಲು ಬೇಕಿಲ್ಲದಿದ್ದರೆ ನೀವು ಸುಮ್ಮನಿದ್ದು ಬಿಡಿ. ಫಿಲಂ (ನಾಟಕವನ್ನು) ನಿಲ್ಲಿಸಬೇಕಿದ್ದರೆ, ಮಾತನಾಡದೆ ಸುಮ್ಮನಿದ್ದು ಬಿಡಬೇಕು. ಫಿಲಂ ಮುಂದುವರಿಸಲು ನಿಮಗೆ ಇಷ್ಟವಿದ್ದರೆ, ರಾತ್ರಿ ಇಡೀ ನಡೆಸಿ ಯಾರು ಬೇಡ ಹೇಳುತ್ತಾರೆ? ನಿಮಗೆ ಫಿಲಂ ಮುಂದುವರಿಸಿಕೊಂಡು ಹೋಗಲು ಇಷ್ಟವೇ?

**ಪ್ರಶ್ನಕರ್ತ:** ಇಲ್ಲ. ಇಷ್ಟವಿಲ್ಲ.

**ದಾದಾಶ್ರೀ:** ಕ್ರೋಧಗೊಂಡು ಏನು ಮಾಡುವುದಿದೆ? ನಿಜವಾಗಿ, ನಿಮ್ಮ ಯಜಮಾನರು ಕ್ರೋಧಗೊಳ್ಳುತ್ತಿಲ್ಲ. ಅದು, ಅವರ ಒಳಗಿನ mechanical adjustment ನಿಂದಾಗಿ ಅವರಿಗೆ ಕ್ರೋಧ ಉಂಟಾಗಿರುವುದು. ಹಾಗಾಗಿಯೇ ನೋಡಿ, ನಿಮ್ಮ ಮೇಲೆ ಕ್ರೋಧಗೊಂಡ ನಂತರ ಅವರಿಗೂ ಮನಸ್ಸಿನೊಳಗೆ ಬಹಳ ಪಶ್ಚಾತ್ತಾಪ ಉಂಟಾಗುವುದೇ ಆಗಿದೆ. ಹೆಂಡತಿಯ ಮೇಲೆ ಕ್ರೋಧಗೊಂಡಿರುವುದು ಸರಿಯಲ್ಲವೆಂದು ಅವರಿಗೂ ಅನ್ನಿಸುವುದು.

**ಪ್ರಶ್ನಕರ್ತ:** ಅವರನ್ನು ಶಾಂತವಾಗಿಸಲು ಉಪಾಯವೇನು?

**ದಾದಾಶ್ರೀ:** ಯಾವುದೇ machine (ಯಂತ್ರೋಪಕರಣ) ಆಗಿರಲಿ, ಅದು ಹೆಚ್ಚು ಬಿಸಿಯಾಗಿರುವಾಗ, ಅದನ್ನು ತಣ್ಣಗಾಗಿಸಲು ಅದರಷ್ಟಕ್ಕೆ ಸ್ವಲ್ಪ ಸಮಯದವರೆಗೆ ಮುಟ್ಟದೆ ಇದ್ದಾಗ, ಅದರಷ್ಟಕ್ಕೆ ಅದು ತಣ್ಣಗಾಗುತ್ತದೆ. ಆಮೇಲೆ ನಾವು ಅದನ್ನು

ಮುಟ್ಟಬಹುದು. ಅದುಬಿಟ್ಟು, ಬಿಸಿ ಇರುವಾಗಲೇ ನಾವು ಅದರ ಮೇಲೆ ಸಿಟ್ಟಿನಿಂದ ಒದೆಯಲು ಹೋದರೆ, ನಮ್ಮ ಕಾಲನ್ನು ನಾವೇ ಸುಟ್ಟುಕೊಳ್ಳಬೇಕಾಗುವುದು.

**ಪ್ರಶ್ನಕರ್ತ:** ನನಗೆ ಹಾಗೂ ನನ್ನ husband ಗೆ ಕ್ರೋಧ ಬಂದಾಗ ನಮ್ಮಿಬ್ಬರ ನಡುವೆ ತರ್ಕ ಶುರುವಾಗಿ, ಮಾತಿಗೆ ಮಾತು ಬೆಳೆಸಿಕೊಂಡು ಹೋಗಿಬಿಡಲಾಗುವುದು. ಹಾಗೆ ಆಗದಿರಲು ನಾನೇನು ಮಾಡಬೇಕು?

**ದಾದಾಶ್ರೀ:** ಮೊದಲು ಕ್ರೋಧಗೊಳ್ಳುವುದು ಯಾರು ನೀವೋ ಅಥವಾ ಅವರೋ?

**ಪ್ರಶ್ನಕರ್ತ:** ಅವರೇ, ನಂತರ ನನಗೂ ಕ್ರೋಧ ಉಂಟಾಗುವುದು.

**ದಾದಾಶ್ರೀ:** ಅಂತಹ ಸಮಯದಲ್ಲಿ, ನಮ್ಮೊಳಗೆ ನಮ್ಮನ್ನು ನಾವೇ ತರಾಟೆಗೆ ತೆಗೆದುಕೊಳ್ಳಬೇಕು, 'ಯಾಕೆ ನೀನು ಹಾಗೆ ಕ್ರೋಧಗೊಳ್ಳಲು ಹೋಗುತ್ತೀಯಾ? ಹಿಂದೆ ಯಾವಾಗಲೋ ಯಾರ ಮೇಲೋ ನೀನು ಕ್ರೋಧಗೊಂಡಿರುವುದರ ಪರಿಣಾಮವಾಗಿ ಈಗ ನಿನಗೆ ಅನುಭವಿಸಲು ಬಂದಿದೆ!'ಎಂದು. ಹಾಗೂ ಈಗ ಹಿಂದೆಲ್ಲಾ ಮಾಡಲಾಗಿರುವ ನಿಮ್ಮ ದೋಷಗಳಿಗೆ ಪ್ರತಿಕ್ರಮಣ ಮಾಡುವುದರಿಂದ ನಿಮ್ಮೆಲ್ಲಾ ದೋಷಗಳು ನಾಶವಾಗುತ್ತವೆ. ಹಿಂದೆ ನಾವು ಮಾಡಿರುವ ತಪ್ಪಿಗೆ, ಈಗ ನಾವು ಅನುಭವಿಸ ಬೇಕಾಗಿರುವುದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. ಹಾಗೂ ನಮ್ಮ ತಪ್ಪುಗಳಿಗಾಗಿ ನಾವು ಪ್ರತಿಕ್ರಮಣ ಮಾಡುವುದರಿಂದ ನಮ್ಮಿಂದ ಈಗ ಉಂಟಾಗುವ ಕ್ರೋಧವು ಕೂಡಾ ಕಾಲ ಕ್ರಮೇಣ ಕಡಿಮೆಯಾಗುವುದು.

## ಕ್ರೋಧಗೊಳ್ಳುವುದು ಒಂದು ಬಗೆಯ ಪಶುತ್ವ!

**ಪ್ರಶ್ನಕರ್ತ:** ನಮ್ಮಿಂದ ಕ್ರೋಧಗೊಳ್ಳಲಾಗಿದ್ದರೆ ಹಾಗೂ ಮತ್ತೊಬ್ಬರಿಗೆ ಗದರಿಸಲಾಗಿದ್ದರೆ, ಅಂತಹ ವರ್ತನೆಯಲ್ಲಿ ಸುಧಾರಣೆಯನ್ನು ನಾವು ಹೇಗೆ ತಂದುಕೊಳ್ಳುವುದು?

**ದಾದಾಶ್ರೀ:** ಅದೇನೆಂದರೆ, ಕ್ರೋಧಗೊಳ್ಳುವುದು, ಬಯ್ಯುವುದು ಇವೆಲ್ಲಾ ತನ್ನ ಮೇಲೆ ತನಗೆ control (ಹಿಡಿತ) ಇಲ್ಲದಿರುವುದರಿಂದ ಉಂಟಾಗುವುದು. ಕ್ರೋಧದ

ಮೇಲೆ control ಇಟ್ಟುಕೊಳ್ಳಬೇಕೆಂದಿದ್ದರೆ, ಮೊದಲಿಗೆ ಸರಿಯಾದ ತಿಳುವಳಿಕೆಯನ್ನು ನಾವು ಹೊಂದಿರಬೇಕು. ಯಾರಾದರು ನಮ್ಮ ಮೇಲೆ ಕ್ರೋಧಗೊಂಡರೆ ಅದನ್ನು ನಮ್ಮಿಂದ ಸಹಿಸಿಕೊಳ್ಳಲಾಗುವುದೇ? ಎನ್ನುವುದನ್ನು ನಾವು ಗಮನಿಸಬೇಕು. ಬೇರೆಯವರು ನಮ್ಮ ಮೇಲೆ ಕ್ರೋಧಗೊಂಡರೆ, ನಮಗೆ ಹೇಗೆ ಇಷ್ಟವಾಗುವುದಿಲ್ಲವೋ, ಅದೇ ರೀತಿ ಬೇರೆಯವರ ಮೇಲೆ ನಾವು ಕ್ರೋಧಗೊಂಡಾಗ, ಅವರಿಗೂ ಅದು ಇಷ್ಟವಾಗುವುದಿಲ್ಲ. ಹಾಗಾಗಿ, ನಮಗೇನು ಇಷ್ಟ, ಅದನ್ನೇ ನಾವು ಬೇರೆಯವರೊಂದಿಗೆ ಹಂಚಿಕೊಳ್ಳಬೇಕು.

ನಿಮ್ಮನ್ನು ಬೇರೆಯವರು ನಿಂದಿಸುವಾಗ ನಿಮಗೆ ಬೇಸರವಾಗದೇ ಇದ್ದರೆ, depression ಗೆ ಒಳಗಾಗದೇ ಹೋದರೆ, ಆಗ ಮತ್ತೊಬ್ಬರನ್ನು ನೀವು ಕೂಡಾ ನಿಂದಿಸಬಹುದು. ನಿಮಗೆ ಬೇರೆಯವರ ವರ್ತನೆಯು ಬೇಸರ ತರುವಂತಹದ್ದಾಗಿದ್ದರೆ, ಅಂತಹ ವರ್ತನೆ ನಿಮ್ಮಲ್ಲಿ ಉಂಟಾಗದಂತೆ ನೋಡಿಕೊಳ್ಳಬೇಕು. ಯಾರನ್ನೇ ಆಗಲಿ ಬಯ್ಯುವುದು ಸರಿಯಲ್ಲ. ಅದು ಒಂದು ಬಗೆಯ ಪಶುತ್ವ. underdeveloped people! ಪಶುತ್ವ ಉಳ್ಳ ಮನುಷ್ಯರು!

## ಪ್ರತಿಕ್ರಮಣ, ಅದೇ ನಿಜವಾದ ಮೋಕ್ಷಮಾರ್ಗ!

ಜಗತ್ತಿನಲ್ಲಿ ಜನರಿಗೆ, ದಯೆ ಇಟ್ಟುಕೊಳ್ಳಬೇಕು, ಶಾಂತಿಯಿಂದ ವರ್ತಿಸಬೇಕು, ಸಮಾಧಾನದಿಂದ ಇರಬೇಕು, ಕ್ಷಮೆ ಇರಬೇಕು ಎಂದೆಲ್ಲಾ ಸಾಧು-ಸಂತರು ಉಪದೇಶ ನೀಡಿ, ಜನರಿಗೆ ಕಲಿಸಿಕೊಡಲು ಪ್ರಯತ್ನಿಸಲಾಗಿದ್ದರೂ, ಜನರು ಹೇಳುವುದೇನು, 'ಏನು ಮಾಡಲಿ, ನನಗೆ ಕ್ರೋಧ ಬಂದುಬಿಡುತ್ತದೆ. ನೀವು ಕ್ಷಮೆ ಇರಬೇಕೆಂದು ಹೇಳುತ್ತೀರಿ. ಆದರೆ, ಹೇಗೆ ನಾನು ಕ್ಷಮಿಸುವುದು? ಎನ್ನುವುದೇ ತಿಳಿಯುವುದಿಲ್ಲ' ಎನ್ನುತ್ತಾರೆ. ಹಾಗಾಗಿಯೇ, ಈಗ ನಾವು ನೀಡುವ ತಿಳುವಳಿಕೆ ಏನೆಂದರೆ, ನೀವು ಕ್ರೋಧಗೊಂಡರೂ ಸಹ, ನಿಮ್ಮೊಳಗೆ ಮನಸ್ಸಿನಲ್ಲಿ ಪಶ್ಚಾತ್ತಾಪ ಪಟ್ಟುಕೊಂಡು ವಿಚಾರ ಮಾಡಬೇಕು, 'ನನಗಿರುವ ಯಾವ ದೌರ್ಬಲ್ಯದಿಂದಾಗಿ ನನ್ನಿಂದ ಕ್ರೋಧಗೊಳ್ಳುವಂತಾಗಿದೆ? ಇದು ನನ್ನಿಂದ ಉಂಟಾಗುತ್ತಿರುವ ತಪ್ಪು.' ಎಂದು ಅರಿತುಕೊಂಡು, ನಿಮ್ಮ ತಪ್ಪಿನ ಬಗ್ಗೆ ನೀವು ಪಶ್ಚಾತ್ತಾಪ ಪಡಬೇಕು, ಜೊತೆಗೆ ನೀವು

ಯಾರನ್ನು ನಿಮ್ಮ ಗುರುಗಳೆಂದು ಇಲ್ಲಿಯವರೆಗೂ ಪಾಲಿಸಿಕೊಂಡು ಬರಲಾಗಿದೆಯೋ, ಅವರ ಆಧೀನದಲ್ಲಿ ಇದ್ದುಕೊಂಡು, ಅವರ ಸಲಹೆಯನ್ನು ಪಡೆಯಬೇಕು. ಹಾಗೂ ಮತ್ತೆಂದೂ ಅಂತಹ ದೌರ್ಬಲ್ಯಗಳು ನಿಮ್ಮಲ್ಲಿ ಉಂಟಾಗಬಾರದು ಎನ್ನುವಂತಹ ದೃಢ ನಿರ್ಧಾರವನ್ನು ನೀವು ತೆಗೆದುಕೊಳ್ಳಬೇಕು. ನಿರ್ಧರಿಸಿದ ನಂತರ ನಿಮಗೆ ಉಂಟಾಗುವ ಕ್ರೋಧದ ರಕ್ಷಣೆಯನ್ನು ಸಹ ನೀವು ಮಾಡಲು ಹೋಗಬಾರದು. ಬದಲಿಗೆ ಉಂಟಾಗುವ ಕ್ರೋಧದ ಬಗ್ಗೆ, 'ಹೀಗೆಲ್ಲಾ ವರ್ತಿಸುವುದು ಸರಿಯಲ್ಲ'ವೆಂದು ಆಗಿಂದಾಗಲೇ ಪಶ್ಚಾತ್ತಾಪ ಪಡುವಂತಾಗಬೇಕು.

ನಿಮ್ಮಿಂದ ದಿನದಲ್ಲಿ ಎಷ್ಟು ಬಗೆಯ ಅತಿಕ್ರಮಣ ಮಾಡಲಾಗಿದೆ ಹಾಗೂ ಯಾರ ಮೇಲೆಲ್ಲಾ ಅಂತಹ ರೀತಿಯಿಂದ ವರ್ತಿಸಲಾಗಿರುವುದೋ, ಅವೆಲ್ಲವನ್ನೂ ಒಂದುಕಡೆ ನೋಂದಾಯಿಸಿ (ಬರೆದಿಟ್ಟುಕೊಂಡು), ಅವುಗಳ ಬಗ್ಗೆ ಆ ಕ್ಷಣದಲ್ಲೇ ಪ್ರತಿಕ್ರಮಣವನ್ನು ಮಾಡಿಬಿಡಬೇಕು.

ಪ್ರತಿಕ್ರಮಣವನ್ನು ನೀವು ಮಾಡಬೇಕಾಗಿದೆ ಯಾಕೆ? ಯಾಕೆಂದರೆ, ಮತ್ತೊಬ್ಬರೊಂದಿಗೆ ನೀವು ಕ್ರೋಧದಿಂದ ವರ್ತಿಸುವಾಗ ಅವರಿಗೆ ದುಃಖ ಉಂಟಾಗುವುದೇ ಆಗಿದೆ. ಹಾಗಾಗಿ, ಅವರೊಳಗಿರುವ ಆತ್ಮಸ್ವರೂಪಿ ಭಗವಂತನಲ್ಲಿ ನೀವು ಕ್ಷಮೆಯಾಚಿಸಬೇಕು. ನಿಮ್ಮಿಂದಾಗಿರುವ ತಪ್ಪಿಗೆ ಕ್ಷಮೆ ಬೇಡಬೇಕು ಹಾಗೂ ಮತ್ತೆ ಅಂತಹ ತಪ್ಪನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆ ಮಾಡಬೇಕು. ಹಾಗೂ ಆಲೋಚನೆ ಅಂದರೇನು? ನಮ್ಮಿಂದಾಗಿರುವ ದೋಷವನ್ನು ನಮ್ಮೊಳಗೆ ಅವಲೋಕಿಸಿಕೊಂಡು, 'ನನ್ನಿಂದ ಇಂತಹದ್ದೆಲ್ಲಾ ತಪ್ಪುಗಳಾಗಿವೆ'ಯೆಂದು, ನಮ್ಮ ದೋಷವನ್ನು ನಮ್ಮೊಳಗೆ ನಾವು ಅರಿತುಕೊಳ್ಳುವುದು.

## ಮನಸ್ಸಿನಲ್ಲೇ ಕ್ಷಮೆಯಾಚಿಸಬಹುದು!

**ಪ್ರಶ್ನಕರ್ತ:** ದಾದಾ, ಪಶ್ಚಾತ್ತಾಪ ಹಾಗೂ ಪ್ರತಿಕ್ರಮಣ ಮಾಡುವಾಗ, ಬಹಳಷ್ಟು ಬಗೆಯ ಏನಾಗುತ್ತದೆಯೆಂದರೆ, ನಮ್ಮಿಂದಾಗಿರುವ ತಪ್ಪಿಗೆ ಹಾಗೂ ಬೇರೆಯವರ ಮೇಲೆ ನಮಗೆ ಉಂಟಾಗಿರುವ ಕ್ರೋಧ ಬಗ್ಗೆ, ನಮ್ಮೊಳಗೆಯೇ ಬಹಳ

ವ್ಯಥೆಪಡಲಾಗುತ್ತದೆ, 'ನನ್ನಿಂದ ತಪ್ಪಾಗಿದೆ.' ಎನ್ನುವುದು ಸಹ ತಿಳಿದುಬರುತ್ತದೆ. ಆದರೆ, ಆ ವ್ಯಕ್ತಿಯ ಎದುರಿಗೆ ಹೋಗಿ ಕ್ಷಮೆಯಾಚಿಸುವ ಧೈರ್ಯ ಬರುವುದಿಲ್ಲ.

**ದಾದಾಶ್ರೀ:** ಹಾಗೇನು ವ್ಯಕ್ತಿಯ ಎದುರಿಗೆ ಹೋಗಿ ಕ್ಷಮೆಯಾಚಿಸುವ ಅಗತ್ಯವಿಲ್ಲ. ಹಾಗೆ ನೀವು ಅವರಲ್ಲಿ ಕ್ಷಮೆ ಕೇಳಲು ಹೋದರೆ, ಅವರು ಅದರ ದುರುಪಯೋಗ ಪಡಿಸಿಕೊಳ್ಳುತ್ತಾರೆ. ಹಾಗೂ ಅವರು ನಿಮ್ಮನ್ನೇ ಹೀಯಾಳಿಸುತ್ತಾರೆ, 'ಈಗ ನಿನಗೆ ಬುದ್ಧಿ ಬಂತಾ?'ಯೆಂದು ಹಂಗಿಸುತ್ತಾರೆ. ಈಗಿನ ಕಾಲದ ಜನರಲ್ಲಿ noble (ಉದಾರ ಮನಸ್ಸು) ಇಲ್ಲ. ಅವರ ಬಳಿಗೆ ಹೋಗಿ ಕ್ಷಮೆ ಕೇಳಿಕೊಳ್ಳಲಾಗುವಂತಹ ಜನರು ಈಗಿಲ್ಲ. ಹಾಗಾಗಿ, ನಿಮ್ಮೊಳಗೆಯೇ ಅವರೊಳಗಿರುವ ಭಗವಂತನಲ್ಲಿ ಕ್ಷಮೆ ಕೇಳಿಕೊಳ್ಳಬೇಕು! ಎಲ್ಲೋ ಸಾವಿರದಲ್ಲಿ ಒಬ್ಬರು ಅಂತಹ ಮಹಾನ್ ವ್ಯಕ್ತಿಗಳು ಇರುತ್ತಾರೆ, ಅವರ ಮುಂದೆ ನೀವು ಹೋಗಿ ಕ್ಷಮೆ ಕೇಳುವ ಮೊದಲೇ ಹೆಚ್ಚಿನ ನಮ್ರತೆಯಿಂದ ಅವರೇ ನಿಮಗೆ ನಮಿಸುತ್ತಾರೆ.

## ಹೃದಯಾಳದಿಂದ ಮಾಡುವ ಪ್ರತಿಕ್ರಮಣವು ತತ್ ಕ್ಷಣವೇ ನಗದು ಪರಿಣಾಮ ನೀಡುವುದು!

**ಪ್ರಶ್ನಕರ್ತ:** ಯಾರ ಮೇಲಾದರೂ ನನಗೆ ಅತಿ ಹೆಚ್ಚು ಕ್ರೋಧ ಉಂಟಾಗಿ, ನಂತರ ಬಾಯಿಗೆ ಬಂದಂತೆ ಅವರ ಮೇಲೆ ರೇಗಾಡಿದ ನಂತರ ನನ್ನೊಳಗೆ ನನಗೆ, ಹಾಗೆಲ್ಲಾ ಮಾತನಾಡಿರುವುದರ ಬಗ್ಗೆ ಬಹಳ ಚಡಪಡಿಸಲು ಪ್ರಾರಂಭವಾಗುವುದು. ಅಂತಹ ಸಂದರ್ಭಗಳಲ್ಲಿ ನಾನು ಹೆಚ್ಚು ಪ್ರತಿಕ್ರಮಣ ಮಾಡಬೇಕಾಗಿದೆಯಲ್ಲವೇ?

**ದಾದಾಶ್ರೀ:** ಅಂತಹ ಸಂದರ್ಭಗಳಲ್ಲಿ ನೀವು ಎರಡು-ಮೂರೂ ಬಾರಿ ಹೃದಯಪೂರ್ವಕವಾಗಿ ಪ್ರತಿಕ್ರಮಣ ಮಾಡಿಬಿಟ್ಟಾಗ, ಸಂಪೂರ್ಣವಾಗಿ ನಿಮ್ಮಿಂದಾದ ದೋಷವು ಸ್ವಚ್ಛಗೊಳ್ಳುವುದು. 'ಹೇ ದಾದಾ ಭಾಗವಾನ್! ನನ್ನಿಂದ ಮತ್ತೊಬ್ಬರ ಮೇಲೆ ಬಹಳ ಕ್ರೋಧದಿಂದ ವರ್ತಿಸಿರಲಾಗಿದೆ. ಅದರಿಂದಾಗಿ ಅವರಿಗೆ ಹೆಚ್ಚಿನ ದುಃಖ ಉಂಟಾಗಿದೆ. ಅದಕ್ಕಾಗಿ, ನಾನು ನಿಮ್ಮಲ್ಲಿ ಕ್ಷಮೆಯಾಚಿಸುತ್ತೇನೆ. ನಿಮ್ಮ ಬಳಿ ನಾನು ಹೃದಯಾಳದಿಂದ ಕ್ಷಮಿಸಬೇಕೆಂದು ಬೇಡುತ್ತೇನೆ!' ಎಂದು ಕ್ಷಮೆ ಬೇಡಿ ಕೊಂಡರೆ ಸಾಕು.

## ತಪ್ಪುಗಳು ಸಹ ನಿರ್ಜೀವವಾಗಿವೆ!

**ಪ್ರಶ್ನಕರ್ತ:** ಅತಿಕ್ರಮಣದ ಪ್ರಚೋದನೆಯು ಪ್ರತಿಕ್ರಮಣದಿಂದ ತಣ್ಣಗಾಗುವುದೇ?

**ದಾದಾಶ್ರೀ:** ಹೌದು. ತಣ್ಣಗಾಗಿಬಿಡುವುದು. ಆದರೆ, ಕೆಲವೊಂದು ಸಂದರ್ಭಗಳಲ್ಲಿ ಪ್ರತಿಕ್ರಮಣವನ್ನು ಹೆಚ್ಚು ಮಾಡಬೇಕಾಗಿ ಬರುವುದು. ಎಲ್ಲಿ ನಮಗೆ 'ಜಿಗುಟಿನ ಫೈಲ್' ಇರುತ್ತದೆ, ಬಹಳ ಹತ್ತಿರದ ಸಂಬಂಧಗಳಲ್ಲಿ ನಮ್ಮಿಂದ ದೋಷಗಳು ಉಂಟಾಗುತ್ತಲೇ ಇರುವುದೋ, ಅಲ್ಲಿ ಹೆಚ್ಚು ಬಾರಿ ಪದೇ ಪದೇ ಪ್ರತಿಕ್ರಮಣವನ್ನು ಮಾಡಿದಾಗಷ್ಟೇ ಮತ್ತೊಬ್ಬರೊಂದಿಗೆ ನಡೆಯುವ ಅತಿಕ್ರಮಣವು ತಣ್ಣಗಾಗುವುದು. ಸಿಟ್ಟನ್ನು ನಾವು ಹೊರಗೆ ತೋರಿಸದಿದ್ದರೂ ನಮ್ಮೊಳಗೆಯೇ ಮತ್ತೊಬ್ಬರ ಬಗ್ಗೆ ಮುನಿಸು ಇದ್ದರೂ ಸಹ ಅದು ಅತಿಕ್ರಮಣವಾಗಿದೆ! ಇಂತಹದ್ದೆಲ್ಲಾ ದೋಷಗಳು ನಮಗೆ ಉಂಟಾಗುವುದನ್ನು ಸಹ ನಾವು ಪ್ರತಿಕ್ರಮಣ ಮಾಡಿ ಸ್ವಚ್ಛಗೊಳಿಸಿಕೊಳ್ಳಬೇಕು. ಇಲ್ಲದೆ ಹೋದರೆ, ದೋಷಗಳು ನಮ್ಮೊಳಗೆ ಕೊಳಕಿನ ಕಲೆಯಂತೆ ಉಳಿದುಕೊಂಡು ಬಿಡುತ್ತವೆ, ನಾವು ಪ್ರತಿಕ್ರಮಣ ಮಾಡಿ ಸ್ವಚ್ಛಗೊಳಿಸಿಕೊಂಡಾಗ ಎಲ್ಲಾ ನಮ್ಮೊಳಗಿನ ಕೊಳಕು ನಿರ್ಮೂಲವಾಗುವುದು. ಪ್ರತಿಕ್ರಮಣ ಮಾಡುವುದರಿಂದ ನಮ್ಮ ದೋಷಗಳು ನಿರ್ಮೂಲನೆಯಾಗಿ ಸ್ವಚಗೊಳ್ಳಲಾಗುವುದು. ಅತಿಕ್ರಮಣ ಮಾಡಲಾಗಿರುವುದರಿಂದ ಪ್ರತಿಕ್ರಮಣ ಮಾಡಿಕೊಳ್ಳಬೇಕಾಗಿದೆ.

**ಪ್ರಶ್ನಕರ್ತ:** ನಾವು ಬೇರೆಯವರ ಮೇಲೆ ಕ್ರೋಧಗೊಳ್ಳಲಾಗಿರುವುದು, ನಂತರ ನಮಗೆ, ಅದು ನಮ್ಮ ತಪ್ಪೆಂದು ಗಮನಕ್ಕೆ ಬಂದಾಗ ತಕ್ಷಣ ನಾವು ಅವರ ಬಳಿ ಕ್ಷಮೆ ಕೇಳಿಕೊಂಡರೆ, ಆಗ ಅದನ್ನು ಏನೆಂದು ಪರಿಗಣಿಸಲಾಗುತ್ತದೆ?

**ದಾದಾಶ್ರೀ:** ನೀವು ಜ್ಞಾನವನ್ನು ತೆಗೆದುಕೊಂಡ ಮೇಲೂ ನಿಮ್ಮಲ್ಲಿ ಕ್ರೋಧಗೊಳ್ಳುವಂತಹ ವರ್ತನೆ ನಿಮಗೆ ಕಂಡು ಬರುತ್ತಲೇ ಇರುವುದು. ಆದರೆ, ಅದನ್ನು ನೀವು ಅರಿತುಕೊಂಡು ಕ್ಷಮೆ ಕೇಳಿದಾಗ, ನೀವು ದೋಷದಿಂದ ಮುಕ್ತರಾಗುವಿರಿ! ಅಲ್ಲೇನು ವೈಯಕ್ತಿಕವಾಗಿ ಕ್ಷಮೆ ಕೇಳಬೇಕಾದ ಅಗತ್ಯವಿಲ್ಲ, ನಿಮ್ಮ ಮನಸ್ಸಿನಲ್ಲೇ ಅವರೊಳಗೆ ನೆಲಸಿರುವ ಪರಮಾತ್ಮನಲ್ಲಿ ಕ್ಷಮೆ ಕೇಳಿಕೊಂಡರೆ ಸಾಕು.

**ಪ್ರಶ್ನಕರ್ತ:** ವ್ಯಕ್ತಿಗತವಾಗಿ ಎಲ್ಲರ ಮುಂದೆ ಕ್ಷಮೆಯಾಚಿಸುವುದು ಬೇಕಿಲ್ಲವೇ?

**ದಾದಾಶ್ರೀ:** ಬೇಕಿಲ್ಲ. ಹಾಗೆ ಯಾರೂ ಕ್ಷಮೆ ಕೇಳಲು ಇಷ್ಟಪಡುವುದಿಲ್ಲ. ನಿಮ್ಮೊಳಗೆ ನೀವು ಪರಮಾತ್ಮನಲ್ಲಿ ಕ್ಷಮೆಯಾಚಿಸಿ ಕೊಂಡರೂ ನಡೆಯುತ್ತದೆ. ಯಾಕೆಂದರೆ, ನಿಮಗೆ ಈ ಜ್ಞಾನದ ನಂತರ ಉಂಟಾಗುವ ನಿಮ್ಮೆಲ್ಲಾ ದೋಷಗಳು ಈಗ ಜೀವಂತವಾಗಿಲ್ಲ. ಅವೆಲ್ಲಾ 'discharge' ಭಾಗದ ತಪ್ಪುಗಳಾಗಿವೆ, 'discharge' ತಪ್ಪುಗಳು ಅಂದರೆ, ಅವು ಜೀವಂತವಾಗಿಲ್ಲ! ನಮ್ಮ ದೋಷಗಳಿಗಾಗಿ ಪಶ್ಚಾತ್ತಾಪ ಪಡುವುದರಿಂದ ಮುಂದಕ್ಕೆ ಹೆಚ್ಚಿನ ಕೆಟ್ಟ ಫಲ ಕೊಡಲು ಅವುಗಳೇನು ಬರುವುದಿಲ್ಲ!

## ಪ್ರತಿಷ್ಠಾಪಿಸಿಕೊಳ್ಳಲಾಗಿರುವುದರಿಂದ ಕ್ರೋಧ-ಮಾನ-ಮಾಯಾ-ಲೋಭಗಳೆಂಬ ಕಷಾಯಗಳು ಜೀವಂತವಾಗಿವೆ!

ಈಗ, ನಿಮ್ಮಿಂದ ಉಂಟಾಗುತ್ತಿರುವ ತಪ್ಪುಗಳು ನಿಮ್ಮಿಂದ ನಡೆಯುತ್ತಿಲ್ಲ. ನಿಮ್ಮೊಳಗಿರುವ ಕ್ರೋಧ-ಮಾನ-ಮಾಯಾ-ಲೋಭಗಳೆಂಬ ಈ ಕಷಾಯಗಳದ್ದೇ ಆಡಳಿತ! ನಿಮಗೆ 'ನಾನು ಯಾರು?' ಎನ್ನುವ ಅರಿವು ಮೂಡಿದ ಮೇಲೆ ಕಷಾಯಗಳು ಹೊರಟುಹೋಗುತ್ತವೆ. ಸಾಮಾನ್ಯವಾಗಿ ಜನರಿಗೆ ಕ್ರೋಧ ಉಂಟಾದಾಗ ಪಶ್ಚಾತ್ತಾಪ ಪಟ್ಟುಕೊಳ್ಳುತ್ತಾರೆ. ಆದರೆ, ಭಗವಾನರು (ತೀರ್ಥಂಕರರು) ತಿಳಿಸಿಕೊಡಲಾಗಿರುವ ರೀತಿಯಲ್ಲಿ ಪ್ರತಿಕ್ರಮಣ ಮಾಡಲು ಬರದೇ ಹೋದರೆ, ಅಂತಹ ಪಶ್ಚಾತ್ತಾಪದಿಂದೇನು ಪ್ರಯೋಜನ? ಸರಿಯಾದ ರೀತಿಯಲ್ಲಿ ಪ್ರತಿಕ್ರಮಣ ಮಾಡಲು ಬಂದಾಗ ಮುಕ್ತರಾಗಲು ಸಾಧ್ಯ.

ಹಾಗಾಗಿಯೇ ನಾವು ತಿಳಿದುಕೊಳಬೇಕಾಗಿದೆ, 'ಈ ಕ್ರೋಧ-ಮಾನ-ಮಾಯಾ-ಲೋಭ ಎಲ್ಲಿಯವರೆಗೆ ಮತ್ತೆ ಮತ್ತೆ ಹುಟ್ಟಿಕೊಳ್ಳುತ್ತಾ ಇರುತ್ತವೆ?' ಎಂದು. ಎಲ್ಲಿಯವರೆಗೆ 'ನಾನು ಚಂದುಲಾಲ್ (ಓದುಗರು ತಮ್ಮ ಹೆಸರನ್ನು ಇಲ್ಲಿ ಅವಳವಡಿಕೊಳ್ಳಬೇಕು) ಹಾಗೂ ಈ ದೇಹ ನಾನೇ ಆಗಿದ್ದೇನೆ.' ಎನ್ನುವುದು ತನ್ನಲ್ಲಿ ಎಷ್ಟು ಸದೃಢವಾಗಿ ಇರುವುದೋ, ಅಲ್ಲಿಯವರೆಗೂ ಅವೆಲ್ಲಾ ಕಷಾಯಗಳು ಜೀವಂತವಾಗಿ ತನ್ನೊಳಗೆ ಉಳಿದುಕೊಂಡಿರುತ್ತವೆ. ನಮ್ಮನ್ನು ನಾವು ಎಷ್ಟರ ಮಟ್ಟಿಗೆ ಪ್ರತಿಷ್ಠಾಪಿಸಿಕೊಳ್ಳಲಾಗಿದೆಯೆಂದರೆ, 'ನಾನು ಚಂದುಲಾಲ್ ಹಾಗೂ ಜನರು ಏನೆಂದು

ನನ್ನನ್ನು ಪ್ರತಿಷ್ಠಾಪಿಸಿದ್ದಾರೆ ಅದನ್ನೇ 'ನಾನು' ಎಂದು ಒಪ್ಪಿಕೊಂಡು, 'ನಾನು ಚಂದುಲಾಲ್' ಎಂದುಕೊಂಡೇ ಎಲ್ಲಿಯವರೆಗೆ ಇರಲಾಗುವುದೋ, ಅಲ್ಲಿಯವರೆಗೂ ಈ ಕ್ರೋಧ-ಮಾನ-ಮಾಯಾ-ಲೋಭ ತನ್ನೊಳಗೆ ಜೀವಂತವಾಗಿ ಉಳಿಯುವುದೇ ಆಗಿದೆ.

ತನ್ನಿಂದ, 'ನಾನು ಚಂದುಲಾಲ್' ಎನ್ನುವಂತಹ ಪ್ರತಿಷ್ಠಾಪನೆ ಮಾಡಿಕೊಳ್ಳಲಾಗಿರುವುದು ಯಾವಾಗ ಹೊರಟುಹೋಗುವುದು? ಯಾವಾಗ, 'ನಾನು ಶುದ್ಧಾತ್ಮ' ಎನ್ನುವ ಅರಿವು ಮೂಡುವುದೋ ಆಗ, ದೇಹಭಾವದ ಪ್ರತಿಷ್ಠಾಪನೆಯು ಹೊರಟುಹೋಗುವುದು. ಅಂದರೆ, ತನ್ನ ನಿಜಸ್ವರೂಪಕ್ಕೆ ತಾನು ಬಂದಮೇಲೆ ಪ್ರತಿಷ್ಠಾಪಿಸುವುದು ನಿಂತುಹೋಗುವುದು. ಆಗ, ಈ ಕ್ರೋಧ-ಮಾನ-ಮಾಯಾ-ಲೋಭ ಹೊರಟುಹೋಗುತ್ತವೆ. ಇಲ್ಲದೆ ಹೋದರೆ, ಅವುಗಳು ನಮ್ಮನ್ನು ಬಿಟ್ಟುಹೋಗುವುದಿಲ್ಲ. ಎಷ್ಟೇ ಹೊಡೆದು-ಬಡೆದು ಓಡಿಸಲು ಪ್ರಯತ್ನಿಸಿದರೂ ಅವು ನಮ್ಮನ್ನು ಬಿಟ್ಟುಹೋಗುವುದಿಲ್ಲ. ಬದಲಿಗೆ ನಮ್ಮೊಳಗೆ ಇನ್ನೂ ಹೆಚ್ಚುತ್ತಾ ಹೋಗುತ್ತವೆ. ಈ ನಾಲ್ಕು ಕಷಾಯಗಳು ಹೇಗೆಂದರೆ, ಒಂದನ್ನು ಹೊಡೆದು ಓಡಿಸಲು ಪ್ರಯತ್ನಿಸಿದರೆ, ಮತ್ತೊಂದು ಅತಿ ಹೆಚ್ಚುವುದು. ಮತ್ತೊಂದನ್ನು ಹೊಡೆದು ಓಡಿಸಲು ಪ್ರಯತ್ನಿಸಿದರೆ, ಆಗ ಇನ್ನೊಂದು ಅತಿಯಾಗಿ ಮೇಲೇಳುವುದು.

## ಕ್ರೋಧವನ್ನು ಕುಗ್ಗಿಸಲು ಹೋದರೆ, ಮಾನ ಹಿಗ್ಗುವುದು!

ಒಬ್ಬರು ಸಾಧು ಮಹಾರಾಜರು ನಮ್ಮ ಬಳಿ ಬಂದು ಹೇಳಿದರು, 'ನಾನು ಕ್ರೋಧವನ್ನು ನಿಗ್ರಹಿಸಿ, ಕುಗ್ಗಿಸಿ, ನಾಶಮಾಡಿಬಿಟ್ಟಿದ್ದೇನೆ.'ಎಂದರು. ಆಗ ನಾನು ಅವರಿಗೆ ಹೇಳಿದೆ, 'ಹಾಗಾಗಿಯೇ ಈಗ ನಿಮ್ಮಲ್ಲಿ 'ಮಾನ' ಎನ್ನುವ ಗೂಳಿ ಹೆಚ್ಚು ಹಿಗ್ಗಿದೆ. ಈಗ, ನಿಮ್ಮಲ್ಲಿ ಕ್ರೋಧವನ್ನು ನಿಗ್ರಹಿಸಲಾಗಿದೆ ಎನ್ನುವಂತಹ 'ಮಾನ' ನಿಮಗೆ ವಿಪರೀತವಾಗಿದೆ.

ಮಾಯಾ ಪುತ್ರರಾಗಿರುವ ಅವುಗಳು ಅಷ್ಟು ಬೇಗ ನಾಶವಾಗುವುದಿಲ್ಲ. ಅದಕ್ಕೆ ಸರಿಯಾದ ಉಪಾಯ ಮಾಡಿದಾಗ ಮಾತ್ರ ಅವುಗಳನ್ನು ತೊಲಗಿಸಲು ಸಾಧ್ಯ. ಅವು ಅಷ್ಟು ಸುಲಭವಾಗಿ ಹೋಗುವುದಿಲ್ಲ. ಈ ಕ್ರೋಧ-ಮಾನ ಎಲ್ಲವೂ ಮಾಯಾ ಪುತ್ರರು. ಈಗ ನಿಮ್ಮಲ್ಲಿ 'ಮಾನ' ಎನ್ನುವ ಗೂಳಿ, 'ನಾನು ಕ್ರೋಧವನ್ನು ನಿಗ್ರಹಿಸಿ ಬಿಟ್ಟೆ,

ನಾನು ಕ್ರೋಧವನ್ನು ಕುಗ್ಗಿಸಿ ಬಿಟ್ಟೆ.' ಎಂದು ಹೇಳಿಕೊಂಡು ಹಿಗ್ಗುತ್ತಿರುವುದು. ನೀವು ಒಂದನ್ನು ಕುಗ್ಗಿಸಲು ಹೋಗುವುದಕ್ಕಿಂತ ನಿಮ್ಮಲ್ಲಿ ನಾಲ್ಕೂ ಕೂಡಾ (ಕ್ರೋಧ-ಮಾನ-ಮಾಯಾ-ಲೋಭ) ಸಮ ಪ್ರಮಾಣದಲ್ಲಿ ಇರುವುದೇ ಒಳಿತು.

## ಕ್ರೋಧ ಹಾಗೂ ಮಾಯಾ ರಕ್ಷಕರಿದ್ದಂತೆ!

ಕ್ರೋಧ ಹಾಗೂ ಮಾಯಾ ರಕ್ಷಕರು! ಲೋಭ ಹಾಗೂ ಮಾನ ಇವೆರಡನ್ನು ಕ್ರೋಧ ಹಾಗೂ ಮಾಯಾ ರಕ್ಷಣೆ ನೀಡುವುದಾಗಿದೆ. ಲೋಭವನ್ನು ರಕ್ಷಿಸುವುದು ಮಾಯಾ ಹಾಗೂ ಮಾನದ ರಕ್ಷಣೆ ಮಾಡುವುದು ಕ್ರೋಧ. ಆದರೂ, ಮಾನದ ವಿಚಾರದಲ್ಲಿ ಮಾಯಾ ಕೂಡಾ ಸ್ವಲ್ಪ ಮಟ್ಟಿಗೆ ರಕ್ಷಣೆಗೆ ಬರುವುದು. ಹೇಗೆಂದರೆ, ಈ 'ಮಾಯಾ' ಕಪಟದ ರೀತಿಯಿಂದ 'ಮಾನ'ದ ರಕ್ಷಣೆ ಮಾಡುವುದು. ಕೆಲವರು ಕಪಟ ಮಾಡಿಯಾದರೂ 'ಮಾನ' ಪಡೆಯಬೇಕೆನ್ನುವವರು ಇರುತ್ತಾರೆ. ಅಂತಹ ವರ್ತನೆಯ ಜನರಿದ್ದಾರಲ್ಲವೇ?

ಕೆಲವರು ಕ್ರೋಧ ಮಾಡಿ ಲೋಭವನ್ನು ಪೂರ್ಣಗೊಳಿಸಿಕೊಳ್ಳುತ್ತಾರೆ. ಆದರೆ, ಹೆಚ್ಚಿನ ಲೋಭ ಉಳ್ಳವ ಸಾಮಾನ್ಯವಾಗಿ ಕ್ರೋಧಗೊಳ್ಳುವುದಿಲ್ಲ. ಲೋಭಿ ಕ್ರೋಧಗೊಂಡರೆ, ಆಗ ತಿಳಿಯುತ್ತದೆ, 'ಲೋಭದ ವಿಚಾರದಲ್ಲಿ ಎಲ್ಲೋ ಅವನಿಗೆ ಅಡಚಣೆಯಾಗಿದೆ.' ಹಾಗಿದ್ದಾಗ ಮಾತ್ರ ಅವನು ಕ್ರೋಧಗೊಳ್ಳುವನ್ನೇ ಹೊರತು, ಸಾಮಾನ್ಯವಾಗಿ ಲೋಭಿಗಳಿಗೆ ಎಷ್ಟೇ ನಿಂದಿಸಿದರೂ ಕ್ರೋಧ ಉಂಟಾಗುವುದಿಲ್ಲ. ಆಗ ಲೋಭಿ ಹೇಳುವುದೇನು, 'ಎಷ್ಟು ಬೇಕಾದರೂ ನನ್ನನ್ನು ತೆಗಳಲಿ. ಆದರೆ, ನನಗೆ ಹಣ ಸಿಕ್ಕಿದರೆ ಸಾಕು.' ಎಂದು. ಲೋಭಿಗಳು ಇರುವುದೇ ಹಾಗೆ. ಯಾಕೆಂದರೆ, ಅವರಲ್ಲೂ ಕೂಡಾ ಈ 'ಕಪಟ' ಅನ್ನುವುದು ಎಲ್ಲಾ ರೀತಿಯಿಂದ ಅವರನ್ನು ರಕ್ಷಿಸುವುದು! 'ಕಪಟ' ಅಂದರೆ 'ಮಾಯಾ'! ಹಾಗಾಗಿ, ಈ ಮಾಯಾ ಹಾಗೂ ಕ್ರೋಧ ರಕ್ಷಕರಿದ್ದಂತೆ.

ಕ್ರೋಧ ಉಂಟಾಗುವುದು ತನ್ನ ಮಾನದ ವಿಚಾರದಲ್ಲಿ ಅಪಮಾನ ಸಿಕ್ಕಾಗ ಕ್ರೋಧಗೊಳ್ಳಲಾಗುವುದು. ಅಪಮಾನದ ಸಂದರ್ಭದಲ್ಲಿ ಕ್ರೋಧ ಉಂಟಾಗುವುದು.

ಆದರೆ, ಕ್ರೋಧವನ್ನು ಹೋಗಲಾಡಿಸುವುದು ಬಹಳ ಸುಲಭ. ಹಾಗಾಗಿ, ಅದನ್ನು ಬೇಗ ನಾಶಮಾಡಬಹುದು. ಕ್ರೋಧ ಅನ್ನುವುದು ಮದ್ದುಗುಂಡು ಇದ್ದಹಾಗೆ. ಎಲ್ಲಿಯವರೆಗೆ ಮದ್ದುಗುಂಡು ಇರುತ್ತದೆ, ಅಲ್ಲಿಯವರೆಗೆ ಸೈನಿಕರು ಹೋರಾಟಕ್ಕೆ ನಿಲ್ಲುವರು. ಮದ್ದುಗುಂಡು (ಕ್ರೋಧವೇ) ಇಲ್ಲದೇ ಹೋದಾಗ ಸೈನಿಕರು ಮಾಡುವುದಾದರೂ ಏನು? ನಂತರ ಪೂರ್ತಿ ಸೈನ್ಯವೇ (ಉಳಿದೆಲ್ಲಾ ಕಷಾಯಗಳು) ಅಲ್ಲಿಂದ ಪರಾರಿಯಾಗುವವು. ಯಾರೂ ಅಲ್ಲಿ ಹೊಡೆದಾಟಕ್ಕೆ ನಿಲ್ಲುವುದಿಲ್ಲ.

## ಕ್ರೋಧದ ಸ್ವರೂಪವೇನು?!

ಕ್ರೋಧ ಅನ್ನುವುದು ಉಗ್ರ ಪರಮಾಣುಗಳಿಂದ ಕೂಡಿದೆ. ಈ ಉಗ್ರ ಪರಮಾಣು ಸ್ಫೋಟಕದ ಪುಡಿ ಇದ್ದಂತೆ. ಹಾಗಾಗಿ, ಸ್ಫೋಟಕದ ಪುಡಿಯನ್ನು ಪೊಟ್ಟಣದೊಳಗೆ ತುಂಬಿಸಿರುವ ಪಟಾಕಿಯಂತೆ. ಅದು ಸ್ಫೋಟಗೊಂಡರೆ, ಎಲ್ಲೆಡೆಯೂ ಬೆಂಕಿ ಹೊತ್ತಿಕೊಳ್ಳುವುದು. ಹಾಗೂ ಯಾವಾಗ ಪೊಟ್ಟಣದೊಳಗಿನ ಸ್ಫೋಟಕ ವಸ್ತು ಖಾಲಿಯಾಗಿ ಬಿಟ್ಟರೆ, ನಂತರ ಪಟಾಕಿಯ ಟೊಳ್ಳು ಪೊಟ್ಟಣವು ತಣ್ಣಗಾಗಿ ಬಿಡುವುದು. ಕ್ರೋಧ ಅನ್ನುವುದು ತನ್ನೊಳಗೆ ತುಂಬಿಕೊಂಡಿರುವ ಉಗ್ರ ಪರಮಾಣುಗಳಾಗಿವೆ.

ಯಾವಾಗ 'ವ್ಯವಸ್ಥಿತ'ದ ಲೆಕ್ಕಾಚಾರದಂತೆ ನಿಯಮಾನುಸಾರವಾಗಿ ಕ್ರೋಧವು ಸ್ಫೋಟಗೊಳ್ಳುವುದೋ, ಆಗ ಬೆಂಕಿ ಹೊತ್ತಿಕೊಂಡು ಎಲ್ಲಾ ಕಡೆ ಆವರಿಸಿಕೊಳ್ಳುವುದು. ಆದರೂ ಅಂತಹ ಉಗ್ರ ವರ್ತನೆಯ ಕ್ರೋಧವನ್ನು ನಾವು ಕ್ರೋಧವೆಂದು ಹೇಳುವುದಿಲ್ಲ. ಆದರೆ, ಕ್ರೋಧದಲ್ಲಿ 'ತಾಂತೋ' (ಕ್ರೋಧವನ್ನು ಮುಂದುವರೆಸಿಕೊಂಡು ಹೋಗುವುದು) ಉಳಿದುಬಿಟ್ಟರೆ, ಅದನ್ನು (ಸಜೀವ) ಕ್ರೋಧವೆಂದು ಕರೆಯಲಾಗುವುದು. ಕ್ರೋಧದಲ್ಲಿ ಎರಡು ಬಗೆ. ತನಗೆ ಒಳಗೆ ಚಡಪಡಿಸುವುದರ ಜೊತೆಗೆ ಜ್ವಾಲಾಮುಖಿಯಂತೆ ಮೇಲೆದ್ದು ಬೇರೆಯವರಿಗೆ ಕೂಡಾ ಅದರ ತಾಪ ತಟ್ಟುವಷ್ಟು ಕ್ರೋಧದ ವರ್ತನೆ. ತನಗೆ ಉಂಟಾಗಿರುವ ಕ್ರೋಧವನ್ನು ಹೊರಗೆ ಎಲ್ಲರಿಗೂ ಕಂಡುಬರುವಂತೆ ವರ್ತಿಸುವುದು ಒಂದು ಬಗೆಯದ್ದಾದರೆ ಮತ್ತೊಂದು ತನ್ನೊಳಗೆಯೇ ತನ್ನನ್ನು ಸುಡುವಂತಹ ಕ್ರೋಧ. ಅದರಲ್ಲೂ ತನಗೆ ಉಂಟಾಗಿರುವ ಕ್ರೋಧವನ್ನು ಬಿಡದೆ ಮುಂದುವರೆಸಿಕೊಂಡು ಹೋಗಲಾಗುವುದೇನಿದೆ, ಅದನ್ನು ಗುಜರಾತಿ ಭಾಷೆಯಲ್ಲಿ 'ತಾಂತೋ' ಎಂದು ಕರೆಯಲಾಗುವುದು. ಅಲ್ಲಿ ಎರಡೂ

ಬಗೆಯಿಂದಲೂ, ಒಳಗೂ ಹಾಗೂ ಹೊರಗೂ ಕ್ರೋಧಗೊಂಡು ವರ್ತಿಸುವುದಾಗಿದೆ. ಆದರೆ, ತನ್ನೊಳಗೆ ಮೊದಲೇ ತುಂಬಿಕೊಂಡಿರುವ ಉಗ್ರ ಪರಮಾಣುಗಳ ಕ್ರೋಧ ಈಗೇನು ವ್ಯಕ್ತವಾಗುವುದೋ, ಅದು ಕೇವಲ ಸ್ಫೋಟಗೊಂಡು ನಾಶವಾಗುವುದಾಗಿದೆ.

## ತನ್ನೊಳಗೆಯೇ ಇಟ್ಟುಕೊಂಡು, ಸಹನೆಮಾಡುವುದು ಕೂಡಾ ಕ್ರೋಧವೇ ಆಗಿದೆ!

ಕ್ರೋಧಗೊಂಡಾಗ ಮಾತನಾಡಿದರೆ ಮತ್ತೊಬ್ಬರಿಗೆ ನೋವಾಗುವುದೆಂದು ತನ್ನೊಳಗೆ ಇಟ್ಟುಕೊಳ್ಳುವುದು ಸಹ ಕ್ರೋಧವಾಗಿದೆ. ಬಾಯಿಬಿಟ್ಟು ತನಗಿರುವ ಕೋಪವನ್ನು ಹೊರಗೆ ಹಾಕುವುದು ಕ್ರೋಧವಲ್ಲ. ನಿಜವಾಗಿ, ತನ್ನೊಳಗೇ ಹೊಗೆಯಾಡುತ್ತಾ, ಯಾರಿಗೂ ತೋರ್ಪಡಿಸದೆ ಸಹಿಸಿಕೊಂಡಿರುವಂತಹದ್ದು ಕ್ರೋಧವಾಗಿದೆ. ಸಹನೆ ಮಾಡುವುದು ಎರಡುಪಟ್ಟು(double) ಹೆಚ್ಚು ಕ್ರೋಧಗೊಂಡ ಹಾಗೆ. ಅಂತಹ ಕ್ರೋಧ ಹೇಗೆಂದರೆ, ಒತ್ತಿ ಹಿಡಿಯಲಾಗಿರುವ 'spring' (ತಂತಿ ಸುರುಳಿಯ) ಹಾಗೆ, ಅದು ಯಾವಾಗ ಸಹನೆ ಮೀರಿ ಮೇಲಕ್ಕೆ ಚಿಮ್ಮುವುದೋ ಗೊತ್ತಾಗುವುದಿಲ್ಲ. ಆದುದ್ದರಿಂದ ಹಾಗೆಲ್ಲಾ ಕ್ರೋಧವನ್ನು ಸಹನೆ ಯಾಕೆ ಮಾಡಬೇಕು? ಅಂತಹ ಕ್ರೋಧವನ್ನು ನಾವು ಜ್ಞಾನದ ಉಪಾಯದಿಂದ ಪರಿಹರಿಸಿಕೊಂಡು ಬಿಡಬೇಕು.

## ಕ್ರೋಧದಲ್ಲೇ ಅತಿ ಹೆಚ್ಚಿನ ಹಿಂಸೆ!

ಬುದ್ಧಿ emotional (ಉದ್ವೇಗ) ಹೊಂದುವಂತೆ ಮಾಡುವುದು. ಹಾಗೂ ಜ್ಞಾನದ ತಿಳುವಳಿಕೆಯಿಂದ ನಾವು ಸೀಮಿತದಲ್ಲಿದ್ದು ವರ್ತಿಸಲಾಗುವುದು. ರೈಲುಗಾಡಿಗೆ motion (ಸೀಮಿತ ವೇಗ) ಅಳವಡಿಸಿಕೊಂಡು ಚಲಿಸುವುದಾಗಿದೆ. ಅದೇನಾದರೂ emotional ಆಗಿಬಿಟ್ಟರೆ ಏನಾಗುವುದು?

**ಪ್ರಶ್ನಕರ್ತ:** ಆಗ accident (ಅಪಘಾತ) ಆಗಿಬಿಡುವುದು.

**ದಾದಾಶ್ರೀ:** ರೈಲುಗಾಡಿ ಉದ್ವೇಗಗೊಂಡು ಅಡ್ಡ-ದಿಡ್ಡಿ ಚಲಿಸಿದರೆ, ಆಗ accident (ಅಪಘಾತ) ಉಂಟಾಗುವುದು. ಅದೇ ರೀತಿ ಮನುಷ್ಯ emotional (ಉದ್ವೇಗ) ಹೊಂದಿದಾಗ, ಶರೀರದೊಳಗಿರುವ ಲಕ್ಷಾಂತರ ಜೀವಾಣುಗಳು ಉದ್ವೇಗದಿಂದಾಗಿ

ಸತ್ತುಹೋಗುತ್ತವೆ. ಕ್ರೋಧಗೊಂಡರೆ ನಮ್ಮೊಳಗೆಯೇ ಹಲವಾರು ಸೂಕ್ಷ್ಮ ಜೀವಾಣುಗಳು ಸತ್ತುಹೋಗುತ್ತವೆ. ಆದರೂ, ಜನರು ಹೇಳುವುದೇನು, 'ನಾನು ಅಹಿಂಸಾ ಧರ್ಮವನ್ನು ಪಾಲಿಸುತ್ತೇನೆ, ಯಾವುದೇ ಜೀವಿಗೂ ಕೊಲ್ಲುವಂತಹ ಹಿಂಸೆಯನ್ನು ನಾನು ಮಾಡುವುದೇ ಇಲ್ಲ.' ಎಂದು. ಆದರೆ, emotional ನಿಂದಾಗಿ, ಕ್ರೋಧದಿಂದಾಗಿ ಎಷ್ಟೊಂದು ಸೂಕ್ಷ್ಮ ಜೀವಿಗಳು ತನ್ನೊಳಗೆಯೇ ಸತ್ತುಹೋಗುತ್ತವೆ!

## ಕ್ರೋಧವನ್ನು ಗೆಲ್ಲಬಹುದು ತಿಳುವಳಿಕೆಯಿಂದ!

ದ್ರವ್ಯ ಅಂದರೆ ಹೊರಗಿನ ವ್ಯವಹಾರ. ಈ ಹೊರಗಿನ ವ್ಯವಹಾರವನ್ನು ತನ್ನಿಂದ ಬದಲಿಸಲು ಸಾಧ್ಯವಾಗದಿದ್ದರೂ ತನ್ನ ಒಳಗಿನ ಭಾವನೆಯನ್ನು ಬದಲಿಸಿ ಬಿಟ್ಟರೂ ಸಾಕು.

ಒಬ್ಬ ವ್ಯಕ್ತಿ ನನ್ನ ಬಳಿ ಬಂದು ಹೇಳಿದರು, ' ಕ್ರೋಧಗೊಳ್ಳುವುದನ್ನು ಅವರಿಂದ ನಿಲ್ಲಿಸಬೇಕು, ಅದಕ್ಕೇನು ಮಾಡುವುದು?' ಎಂದು. ಆದರೆ, ಹಾಗೆಲ್ಲಾ ಕ್ರೋಧವನ್ನು ನಿಲ್ಲಿಸಲು ಸಾಧ್ಯವಿಲ್ಲ. ಕ್ರೋಧವನ್ನು ಮೊದಲಿಗೆ ಏನೆಂದು ಕಂಡುಕೊಳ್ಳಬೇಕು. ಕ್ರೋಧ ಅಂದರೇನು? ಅದು ಉತ್ಪನ್ನವಾಗುವುದು ಹೇಗೆ? ಅದರ ಜನ್ಮ ಯಾವುದರ ಆಧಾರದಿಂದಾಗಿದೆ? ಎನ್ನುವುದನ್ನು ತಿಳಿದುಕೊಳ್ಳದೆ, ಸುಮ್ಮನೆ ಹೇಗೆಂದರೆ ಹಾಗೆ ನಿಮಗೆ ಉಂಟಾಗುವ ಕ್ರೋಧವನ್ನು ನಿಲ್ಲಿಸಲು ಹೋದರೆ ಹೇಗೆ ಸಾಧ್ಯ? ಕ್ರೋಧದ ಅಮ್ಮ ಯಾರು? ಅಪ್ಪ ಯಾರು? ಅದು ಹೇಗೆ ಹುಟ್ಟಿಕೊಂಡಿದೆ? ಅದು ಹುಟ್ಟಿದ hospital ಯಾವುದು, ಯಾವ maternity ward? ಎಂದೆಲ್ಲಾ ವಿವರವಾಗಿ ತಿಳಿದುಕೊಂಡ ಮೇಲೆ ಕ್ರೋಧವನ್ನು ಕಂಡುಕೊಳ್ಳಲು ಸಾಧ್ಯವಾಗುವುದು.

## ಬಿಡುಗಡೆ ಹೊಂದಿರುವವ ಮತ್ತೊಬ್ಬರನ್ನು ಬಿಡಿಸಲು ಸಾಧ್ಯ!

ನಿಮಗೆ, ಯಾವುದೆಲ್ಲಾ ಕೆಟ್ಟದನ್ನು ನಿಮ್ಮೊಳಗಿರುವ ತೆಗೆದುಹಾಕಬೇಕು? ಏನೇನು ನಿಮಗೆ ಬೇಡ? ಅವೆಲ್ಲವನ್ನು ಒಂದು ಪಟ್ಟಿ ಮಾಡಿ, ನನಗೆ ಕೊಡಿ. ಅಲ್ಲದೆ, ನೀವು ಕ್ರೋಧ-ಮಾನ-ಮಾಯಾ-ಲೋಭಗಳಿಂದ ಬಂಧಿತರಾಗಿದ್ದೀರಿ ಅಲ್ಲವೇ?

**ಪ್ರಶ್ನಕರ್ತ:** ಹೌದು. ಸಂಪೂರ್ಣವಾಗಿ ಬಂಧಿತನಾಗಿದ್ದೇನೆ.

**ದಾದಾಶ್ರೀ:** ಬಂಧನಕ್ಕೆ ಒಳಗಾಗಿರುವ ಮನುಷ್ಯ ಹೇಗೆ ತನ್ನನ್ನು ತಾನೇ ಬಿಡಿಸಿಕೊಳ್ಳಲು ಪ್ರಯತ್ನಿಸಿದರೆ ಸಾಧ್ಯವಾಗುವುದೇ? ಸಂಪೂರ್ಣವಾಗಿ ಅವನ ಕೈ-ಕಾಲುಗಳನ್ನು ಕಟ್ಟಿಹಾಕಿರುವಾಗ ಹೇಗೆ ಸ್ವತಃ ತಾನೇ ಬಿಡಿಸಿಕೊಳ್ಳಲಾಗುವುದು?

**ಪ್ರಶ್ನಕರ್ತ:** ಬೇರೆಯವರ ಸಹಾಯವನ್ನು ಅವನು ಪಡೆಯಲೇ ಬೇಕಲ್ಲವೇ?

**ದಾದಾಶ್ರೀ:** ಅವನಂತೆ ಬಂಧಿಸಲ್ಪಟ್ಟಿರುವ ಮತ್ತೊಬ್ಬ ವ್ಯಕ್ತಿಯಿಂದೇನಾದರೂ ಅವನು ಸಹಾಯ ಪಡೆಯಲು ಸಾಧ್ಯವಿದೆಯೇ?

**ಪ್ರಶ್ನಕರ್ತ:** ಇಲ್ಲ. ಬಂಧನದಿಂದ ಮುಕ್ತರಾಗಿರುವವರ ಅಥವಾ ಸ್ವಂತಂತ್ರರಾಗಿರುವವರ help ( ಸಹಾಯ) ಪಡೆಯಬೇಕಾಗುವುದು..

**ದಾದಾಶ್ರೀ:** ಅಂಥವರೇನಾದರೂ ನಿಮಗೆ ಸಿಕ್ಕಿದಾಗ, ಅವರನ್ನು ನೀವು ಕೇಳಬೇಕು, 'ತಾವೇನಾದರೂ ಸಂಸಾರ ಬಂಧನದಿಂದ ಬಿಡುಗಡೆ ಪಡೆಯಲಾಗಿದ್ದರೆ, ನನಗೂ ಸಹ ಮುಕ್ತನಾಗಲು ಸಹಾಯ ಮಾಡಿ.' ಎಂದು. ಆಗ ಮುಕ್ತಗೊಂಡಿರುವವರು ನಿಮ್ಮನ್ನು ಸಂಸಾರ ಬಂಧನದಿಂದ ಬಿಡಿಸಿ ಮುಕ್ತರಾಗುವಂತೆ ಮಾಡುತ್ತಾರೆ. ಅಂಥವರಿಂದ ಮಾತ್ರ ಇತರರನ್ನು ಮುಕ್ತರಾಗಿಸಲು ಸಾಧ್ಯ. ಅವರನ್ನು ಬಿಟ್ಟು, ಬೇರೆ ಯಾರೂ ನಿಮ್ಮನ್ನು ಸಂಸಾರ ಬಂಧನದಿಂದ ಬಿಡಿಸಲು ಸಾಧ್ಯವಿಲ್ಲ.

## ಕ್ರೋಧ-ಮಾನ-ಮಾಯಾ-ಲೋಭಕ್ಕೆ ನೀಡಲಾಗಿದೆ ಆಹಾರ!

ಕೆಲವರಿಗೆ ಕ್ರೋಧಗೊಳ್ಳಬಾರದೆಂಬ ಹೆಚ್ಚಿನ ಜಾಗೃತಿ ಇರುವುದಾಗಿದ್ದರೂ ಕೂಡಾ ಅವರು ಹೇಳುವುದೇನೆಂದರೆ, 'ನನ್ನಿಂದ ಕ್ರೋಧಗೊಳ್ಳುವಂತಾಗಿ ಬಿಡುತ್ತದೆ. ಅದು ನನಗೆ ಇಷ್ಟವಾಗುವುದಿಲ್ಲ. ಇಷ್ಟವಿಲ್ಲದಿದ್ದರೂ ನಾನು ಕ್ರೋಧಗೊಂಡು ವರ್ತಿಸಿ ಬಿಡುತ್ತೇನೆ.' ಎಂದು.

ಹಾಗೂ ಇನ್ನು ಕೆಲವರು ಕ್ರೋಧಗೊಳ್ಳುತ್ತಾರೆ. ನಂತರ ಅವರು ಹೇಳುವುದೇನೆಂದರೆ, 'ಕ್ರೋಧಗೊಳ್ಳದೆ ಹೋದರೆ ನಮ್ಮ (ವ್ಯವಹಾರದ) ಗಾಡಿ ಮುಂದಕ್ಕೆ ಚಲಿಸುವುದೇ ಇಲ್ಲ. ನಮ್ಮ ವ್ಯವಹಾರದ ಗಾಡಿ ನಿಂತುಬಿಡುತ್ತದೆ.' ಎನ್ನುತ್ತಾರೆ.

ಈ ಕ್ರೋಧ-ಮಾನ-ಮಾಯಾ-ಲೋಭ ನಿರಂತರವಾಗಿ ತನ್ನಿಂದಲೇ ಕಸಿದು ತಿನ್ನುವುತ್ತವೆ. ಆದರೆ, ಜನರಿಗೆ ಇದು ಅರ್ಥವಾಗುವುದಿಲ್ಲ. ಅವು ನಾಲ್ಕು ಕಷಾಯಗಳಿಗೆ ಮೂರೂ ವರ್ಷ ತಿನ್ನಲು ಕೊಡದೆ ನೀವು ಉಪವಾಸ ಹಾಕಿದರೆ, ಆಗ ಅವು ನಿಮ್ಮನ್ನು ಬಿಟ್ಟು ಓಡಿಹೋಗುತ್ತವೆ. ಆದರೆ, ಅವುಗಳಿಗೆ ನಿಮ್ಮಿಂದ ಬೆಂಬಲವೆಂಬ ಆಹಾರ ಸಿಗುತ್ತಿರುವುದರಿಂದ ನಿಮ್ಮೊಳಗೆ ಇದ್ದುಕೊಂಡು ಜೀವಿಸುತ್ತಿವೆ. ಅವುಗಳಿಗೆ ನಮ್ಮಿಂದ ಸಿಗುತ್ತಿರುವ ಆಹಾರ ಏನು? ಎನ್ನುವುದನ್ನು ನಾವು ತಿಳಿದುಕೊಳ್ಳದೆ ಹೋದರೆ, ಹೇಗೆ ಅವುಗಳನ್ನು ಉಪವಾಸ ಹಾಕಿ ನಿರ್ಜೀವಗೊಳಿಸುವುದು? ಸರಿಯಾದ ತಿಳುವಳಿಕೆ ನಿಮಗೆ ಇಲ್ಲದಿರುವುದರಿಂದ ನಿಮ್ಮಿಂದ ಅವುಗಳಿಗೆ ಆಹಾರ ಸಿಗುತ್ತಲೇ ಇದೆ. ಇಲ್ಲದಿದ್ದರೆ, ಅವುಗಳು ಜೀವಂತವಾಗಿರಲು ಹೇಗೆ ಸಾಧ್ಯ? ಅನಾದಿಕಾಲದಿಂದಲೂ ಅವುಗಳು ನಿಮ್ಮೊಳಗೆ ಜೀವಿಸುತ್ತಲೇ ಇವೆ! ಹಾಗಾಗಿ, ಈಗಲಾದರೂ ಅವುಗಳಿಗೆ ನಮ್ಮಿಂದ ಸಿಗುವ ಬೆಂಬಲದ ಆಹಾರವನ್ನು ನಿಲ್ಲಿಸಬೇಕು. ಈ ವಿಚಾರವು ಜನರಲ್ಲಿ ಯಾರಿಗೂ ತಿಳಿದು ಬಂದಿಲ್ಲ. ಎಲ್ಲರೂ ಹೊಡೆದು-ಬಡೆದು ಅವುಗಳನ್ನು ಓಡಿಸಲು ಪ್ರಯತ್ನಿಸುತ್ತಾರೆ. ಆದರೆ, ಹಾಗೆಲ್ಲಾ ಅವುಗಳನ್ನು ಓಡಿಸಲು ಹೋದರೆ ಹೋಗುವುದಿಲ್ಲ. ಅದೇನಿದ್ದರೂ, ಯಾವಾಗ ಈ ದೇಹವನ್ನು ಬಿಟ್ಟು ಆತ್ಮ ಹೊರಡುವುದೋ, ಆಗ, ಅವುಗಳು ಸಹ ದೇಹದೊಂದಿಗಿನ ಸಂಬಂಧಗಳೆಲ್ಲವನ್ನೂ ಸ್ವಲ್ಪವೂ ಬಿಡದೆ ಮುಗಿಸಿಕೊಂಡು ನಂತರ ಅಲ್ಲಿಂದ ಹೊರಡುತ್ತವೆ. ಅವುಗಳಿಗೆ ಹಿಂಸೆಕೊಟ್ಟು, ದಂಡಿಸಿ ಹೊಡೆತ ಹೊಡೆದು ಅವುಗಳನ್ನು ಓಡಿಸಲು ಸಾಧ್ಯವಿಲ್ಲ. ಅದೇನಿದ್ದರೂ ಅವುಗಳನ್ನು ಅಹಿಂಸೆಯ ಹೊಡೆತ ಹೊಡೆದು ಓಡಿಸಬೇಕಾಗುವುದು.

ಆಚಾರ್ಯ ಗುರುಗಳು ಶಿಷ್ಯನ ಮೇಲೆ ಯಾವಾಗ ರೇಗಾಡುತ್ತಾರೆ? ಅವರಿಗೆ ಕ್ರೋಧ ಉಂಟಾದಾಗ. ಅವರು ಕ್ರೋಧಗೊಂಡಿರುವಾಗ ಯಾರಾದರು ಅವರನ್ನು, 'ಗುರುಗಳೇ, ಯಾಕಾಗಿ ಅವನ ಮೇಲೆ ರೇಗಾಡುತ್ತಿದ್ದೀರಿ?' ಎಂದು ಕೇಳಿದಾಗ, 'ಅವನಿಗೆ ಜೋರುಮಾಡಲೇ ಬೇಕು.' ಎಂದು, ಗುರುಗಳು ಅಷ್ಟು ಹೇಳಿದರೂ ಸಾಕು, ಬೇಬಲಿಸುವ ಆಹಾರ ಅವರ ಕ್ರೋಧಕ್ಕೆ ಅವರಿಂದ ದೊರಕಿದಂತಾಯಿತ್ತು. ಅಂದರೆ, ನಮ್ಮ ಕ್ರೋಧವನ್ನು ನಾವು ರಕ್ಷಣೆ ಮಾಡಲಾಗುವುದೇ ಕ್ರೋಧಕ್ಕೆ ಆಹಾರವಾಗಿದೆ.

ಈ ಕ್ರೋಧ-ಮಾನ-ಮಾಯಾ-ಲೋಭ ಇವುಗಳಿಗೆ ಮೂರು ವರ್ಷಗಳವರೆಗೆ ನಮ್ಮಿಂದ ಅವುಗಳನ್ನು ರಕ್ಷಿಸುವಂತಹ ಆಹಾರ ಸಿಗದೇ ಹೋದರೆ, ಆಗ ಅವುಗಳಷ್ಟಕ್ಕೆ ಎಲ್ಲವೂ ಜಾಗ ಖಾಲಿ ಮಾಡುತ್ತವೆ. ನಂತರ ಅವುಗಳಿಗೆ ಹೊರಟು ಹೋಗಿರೆಂದು ನಾವು ಹೇಳುವುದೇ ಬೇಕಿಲ್ಲ. ಯಾಕೆಂದರೆ, ಜಗತ್ತಿನಲ್ಲಿ ಪ್ರತಿಯೊಂದು ವಸ್ತು ಅದರ ಆಹಾರವನ್ನು ಅವಲಂಬಿಸಿಕೊಂಡೇ ಜೀವಿಸುತ್ತಲಿರುವುದು. ಹಾಗೂ ಜಗತ್ತಿನ ಜನರು ಸಹ ಮಾಡುವುದೇನು? ಪ್ರತಿನಿತ್ಯ ಅವರಲ್ಲಿರುವ ಕ್ರೋಧ-ಮಾನ-ಮಾಯಾ-ಲೋಭಕ್ಕೆ ಆಹಾರವನ್ನು (ರಕ್ಷಣೆಯನ್ನು) ನೀಡುತ್ತಲೇ ಇರುವುದಾಗಿದೆ. ಪ್ರತಿನಿತ್ಯ ಆಹಾರವನ್ನು ಕೊಡುತ್ತಲೇ ಇರುತ್ತಾರೆ. ಹಾಗಾಗಿ, ಅವುಗಳು ತಿಂದು ಕೊಬ್ಬಿ ಅಡ್ಡಾಡಿಕೊಂಡಿವೆ.

ಕೆಲವರು ಮಕ್ಕಳಿಗೆ ಹೊಡೆಯುತ್ತಾರೆ. ಹೆಚ್ಚು ಕ್ರೋಧಗೊಂಡು ಮಕ್ಕಳನ್ನು ಹೊಡೆಯುತ್ತಿರುವುದನ್ನು ನೋಡಿ ಯಾರಾದರು, 'ಯಾಕೆ ಮಕ್ಕಳನ್ನು ಹಾಗೆಲ್ಲಾ ಹೊಡೆಯುತ್ತೀರಿ?' ಎಂದು ಕೇಳಿದರೆ, ಅವರು ಹೇಳುತ್ತಾರೆ, 'ನಿಮಗೆ ಗೊತ್ತಿಲ್ಲ. ಅವನಿಗೆ ಹೊಡೆಯಲೇ ಬೇಕು.' ಎನ್ನುವಾಗಲೇ ಅವರ ಕ್ರೋಧಕ್ಕೆ ಗೊತ್ತಾಗುತ್ತದೆ, 'ತನಗೆ ಬೆಂಬಲಿಸುತ್ತಿದ್ದಾರೆ, ನನಗೆ ಆಹಾರವನ್ನು ಕೊಡುತ್ತಿದ್ದಾರೆ!' ಎಂದು. ಅಲ್ಲಿ ಮಕ್ಕಳ ಮೇಲೆ ಕ್ರೋಧಗೊಂಡಿರುವುದು ತಪ್ಪೆಂದು ಅರಿವಾಗದೆ, 'ಇನ್ನು ಹೆಚ್ಚು ಮಕ್ಕಳನ್ನು ದಂಡಿಸಬೇಕು.' ಎನ್ನುವಂತಹ ಅಭಿಪ್ರಾಯವನ್ನು ವ್ಯಕ್ತಪಡಿಸಿದಾಗ, ಕ್ರೋಧಕ್ಕೆ ಅನ್ನಿಸುತ್ತದೆ, 'ನನಗೆ ಒಳ್ಳೆಯ ಆಹಾರ ನೀಡುತ್ತಿದ್ದಾರೆ.' ಎಂದು. ಹೀಗೆಲ್ಲಾ ಕ್ರೋಧವನ್ನು ತಾನು ರಕ್ಷಿಸುವುದರಿಂದ ಕ್ರೋಧಕ್ಕೆ ಆಹಾರವೆಂದು ಹೇಳಲಾಗುವುದು. ನಮಗೆ ಉಂಟಾಗಿರುವ ಕ್ರೋಧಕ್ಕೆ ನಾವು encourage (ಪ್ರೋತ್ಸಹ) ನೀಡುವುದರಿಂದ, ಕ್ರೋಧವನ್ನು ಸರಿಯೆಂದು ಪರಿಗಣಿಸುವುದರಿಂದ, ಅದು ಕ್ರೋಧಕ್ಕೆ ಆಹಾರ ನೀಡಲಾಗಿದೆಯೆಂದು ಹೇಳಲಾಗುವುದು. 'ಕ್ರೋಧಗೊಳ್ಳುವುದು ತಪ್ಪು' ಎಂದು ನಾವು ಅರಿತುಕೊಂಡಾಗ, ನಾವು ಕ್ರೋಧಕ್ಕೆ ಆಹಾರವನ್ನು ನೀಡಿಲ್ಲವೆಂದು ಹೇಳಲಾಗುವುದು. ಕ್ರೋಧದ ಪರ ವಹಿಸಿಕೊಂಡು ಹೋಗಬಾರದು. ಅದರ ಪಕ್ಷ ವಹಿಸಿಕೊಂಡು ಹೋದಾಗ ಮಾತ್ರ ಅದಕ್ಕೆ ಆಹಾರ ದೊರಕಿದಂತಾಗುವುದು. ನಮ್ಮ ರಕ್ಷಣೆಯ ಆಹಾರದಿಂದಲೇ ಕ್ರೋಧವು ಜೀವಿಸುತ್ತಿರುವುದು. ಆದರೆ, ಜನರು ಅವರಿಗೆ ಉಂಟಾಗುವ ಕ್ರೋಧದ ಪಕ್ಷ ವಹಿಸಿಕೊಂಡು ಹೋಗುತ್ತಾರಲ್ಲವೇ?

ನಾವು (ಜ್ಞಾನಿ ಪುರುಷರು), ಈ ಕ್ರೋಧ-ಮಾನ-ಮಾಯಾ-ಲೋಭ ಇವು ಯಾವುದಕ್ಕೂ ರಕ್ಷಣೆ ನೀಡಲು ಹೋಗುವುದಿಲ್ಲ. ನಮಗೇನಾದರೂ ಕ್ರೋಧ ಉಂಟಾದಾಗ, ಯಾರಾದರು ನಮಗೆ, 'ಯಾಕೆ ಕ್ರೋಧಗೊಂಡಿದ್ದೀರಿ?' ಎಂದು ನಮ್ಮನ್ನು ಮತ್ತೊಬ್ಬರು ಕೇಳುವಾಗಲೇ, ನಾವು ನಮ್ಮ ತಪ್ಪೆಂದು ಒಪ್ಪಿಕೊಳ್ಳುತ್ತೇವೆ. 'ಕ್ರೋಧಗೊಳ್ಳಲಾಗಿರುವುದು ನಮ್ಮ ಬಹು ದೊಡ್ಡ ತಪ್ಪು, ನಮ್ಮಲ್ಲಿರುವ ದೌರ್ಬಲ್ಯದಿಂದಾಗಿ ಕ್ರೋಧಗೊಳ್ಳಲಾಗಿದೆ.' ಎಂದು, ನಮ್ಮ ತಪ್ಪನ್ನು ನಾವು ಅರಿತುಕೊಂಡು, ಕ್ರೋಧದ ರಕ್ಷಣೆಯನ್ನು ನಾವು ಮಾಡಲು ಹೋಗುವುದಿಲ್ಲ. ಆದರೆ, ಜಗತ್ತಿನಲ್ಲಿ ಜನರು ಅವರಲ್ಲಿರುವ ಕ್ರೋಧವನ್ನು ರಕ್ಷಣೆ ಮಾಡುತ್ತಾರೆ.

ಸನ್ಯಾಸಿಯೊಬ್ಬರು, ನಶ್ಯ ಎಳೆಯುತ್ತಿದ್ದರು. ಅವರನ್ನು ನೋಡಿ ನಾನು ಕೇಳಿದೆ, 'ತಾವು ಸಾಧುಗಳಾಗಿ ನಶ್ಯ ಸೇವಿಸುತ್ತಿದ್ದೀರಲ್ಲಾ? ಎಂದು, ಅದಕ್ಕೆ ಅವರು, 'ನಶ್ಯದಿಂದೇನು ತೊಂದರೆಯಿಲ್ಲ.' ಎಂದು ಹೇಳಿದರು. ಹಾಗೆಂದು ಅವರು, ಅವರಲ್ಲಿರುವ ದೌರ್ಬಲ್ಯವನ್ನು ರಕ್ಷಣೆ ಮಾಡಿಕೊಳ್ಳುವುದರಿಂದ ಅವರಲ್ಲಿ ನಶ್ಯದ ಚಟ ಅವರಿಂದ ಬಿಟ್ಟುಹೋಗುವುದೂ ಇಲ್ಲ ಜೊತೆಗೆ ಇನ್ನೂ ಹೆಚ್ಚಾಗುವುದು.

ಕ್ರೋಧ-ಮಾನ-ಮಾಯಾ-ಲೋಭ, ಇವು ನಾಲ್ಕು Parliament members (ಸದಸ್ಯರು) ಇದ್ದ ಹಾಗೆ, ನಾಲ್ಕರಲ್ಲಿ ಪ್ರತಿಯೊಬ್ಬ ಮನುಷ್ಯನಿಗೂ ಯಾವುದಾದರು ಒಂದರ ಮೇಲೆ ಹೆಚ್ಚಿನ ಒಲವು ಇರುವುದು ಹಾಗೂ ಉಳಿದ ಮೂರರಲ್ಲೂ ಒಂದಕ್ಕಿಂತ ಮತ್ತೊಂದರಲ್ಲಿ ಒಲವು ಕಡಿಮೆಯಾಗುತ್ತಾ ಹೋಗುವುದು. ಕ್ರೋಧಗೊಳ್ಳುವುದು ಅತಿ ಹೆಚ್ಚಾಗಿದ್ದರೆ, ಆಗ ಮಾನದ ಬಗ್ಗೆ ಹೆಚ್ಚು ವಿಚಾರ ಮಾಡುವುದಿಲ್ಲ. ಹಾಗೆಯೇ ಮಾಯಾ, ಲೋಭದ ಬಗ್ಗೆ ಒಲವು ಇನ್ನೂ ಸ್ವಲ್ಪ ಕಡಿಮೆಯಾಗುತ್ತಾ ಹೋಗುವುದು. ನಾಲ್ಕರಲ್ಲಿ ಯಾವುದನ್ನು ನೀವು ಹೆಚ್ಚು ರಕ್ಷಣೆ ಮಾಡಲು ಹೋಗುವಿರೋ, ಅದರ ಮೇಲೆಯೇ ನಿಮಗೆ ಹೆಚ್ಚಿನ ಒಲವು ಇರುವುದು.

## ಸ್ಥೂಲ-ಕರ್ಮ: ಸೂಕ್ಷ್ಮ-ಕರ್ಮ !

ನಾವು ನಿಮಗೆ, ಸ್ಥೂಲ-ಕರ್ಮ ಅಂದರೇನೆಂದು ತಿಳಿಸಿಕೊಡುತ್ತೇವೆ. ಈಗ ನಿಮಗೆ ಇದಕ್ಕಿದಂತೆ ಕ್ರೋಧ ಬಂದುಬಿಡುತ್ತದೆ. ಅಲ್ಲಿ ನಿಮಗೆ ಕ್ರೋಧಗೊಳ್ಳಬಾರದೆಂದು

ಇದ್ದರೂ, ಕ್ರೋಧ ಬಂದುಬಿಡುತ್ತದೆ. ಹಾಗೆ ಕೆಲವೊಮ್ಮೆ ನಿಮಗೆ ಉಂಟಾಗುತ್ತದೆ ಅಲ್ಲವೇ??

**ಪ್ರಶ್ನಕರ್ತ:** ಹಾಗಾಗುವುದಿದೆ.

**ದಾದಾಶ್ರೀ:** ಯಾವಾಗ ಕ್ರೋಧ ಉಂಟಾಗುವುದೋ, ಆಗ ಅದಕ್ಕೆ ಫಲವು ಆಗಿಂದಾಗಲೇ ಇತರರಿಂದ ಸಿಗುವುದು. ಜನರು ಅಂತಹ ವ್ಯಕ್ತಿಯನ್ನು ನೋಡಿ, 'ಅವನು ಯಾವಾಗಲೂ ಹಾಗೆ. ಬಹಳ ಕೋಪಿಷ್ಠ ವ್ಯಕ್ತಿ.' ಎಂದು ತೆಗಳುತ್ತಾರೆ. ಇನ್ನೂ ಕೆಲವು ಜನರು ಅಂತಹ ವ್ಯಕ್ತಿಗೆ ಕಪಾಳಕ್ಕೆ ಹೊಡೆಯಲು ಸಹ ಮುಂದಾಗುತ್ತಾರೆ. ಅಂದರೆ, ಅವನ ಕೋಪಕ್ಕೆ, ಅವನಿಗೆ ಅಪಕೀರ್ತಿ ಅಥವಾ ಹೊಡೆಸಿಕೊಳ್ಳುವ ಫಲವು ಆಗಿಂದಾಗಲೇ ಸಿಗುವುದು. ಕ್ರೋಧ ಉಂಟಾಗುವುದು ಸ್ಥೂಲ-ಕರ್ಮವಾಗಿದೆ. ಹಾಗೂ ನಿಮಗೆ ಕ್ರೋಧ ಉಂಟಾಗುವಾಗ, ನಿಮ್ಮೊಳಗೆ ಕ್ರೋಧಗೊಂಡು ವರ್ತಿಸುವುದೇ ಸರಿಯೆನ್ನುವಂತಹ ಭಾವನೆ ನಿಮಗಿದ್ದರೆ, ಆಗ ಆ ಭಾವನೆಯಂತೆ ಫಲ ನೀಡುವ ಲೆಕ್ಕಾಚಾರವು ಮುಂದಿನ ಜನ್ಮಕ್ಕೆ ಸೇರಿಕೊಳ್ಳುವುದು. ಈಗ, ನಿಮ್ಮ ಭಾವನೆಯಲ್ಲಿ ಕ್ರೋಧಗೊಳ್ಳಬಾರದು ಎನ್ನುವುದು ನಿಮಗೆ ಇದ್ದಾಗ, ಹಾಗೂ ಮನಸ್ಸಿನಲ್ಲೂ ಸಹ 'ಕ್ರೋಧಗೊಳ್ಳಬಾರದು.' ಎಂದು ನಿಶ್ಚಯಿಸಿದ ನಂತರವೂ ನಿಮ್ಮ ನಿಶ್ಚಯಕ್ಕೆ ವಿರುದ್ಧವಾಗಿ ನಿಮ್ಮಿಂದ ಕ್ರೋಧ ಉಂಟಾದರೂ ಸಹ ಅದರಿಂದೇನೂ ನೀವು ಮುಂದಿನ ಜನ್ಮಕ್ಕೆ ಕರ್ಮವನ್ನು ಕಟ್ಟಿಕೊಳ್ಳುವುದಿಲ್ಲ. ಈ ಜನ್ಮದಲ್ಲೇನು ಸ್ಥೂಲ-ಕರ್ಮದ ಮೂಲಕ ಹೊರಗೆ ವ್ಯಕ್ತಗೊಳ್ಳಬೇಕೋ, ಅದರಂತೆ ಕ್ರೋಧಗೊಂಡು ವರ್ತಿಸಲಾಗುವುದು. ಹಾಗೂ ಆ ಕರ್ಮದ ಫಲ ರೂಪದಲ್ಲಿ ಈ ಜನ್ಮದಲ್ಲೇ ನಿಮಗೆ ಹೊಡೆತ ಕೂಡಾ ಮತ್ತೊಬ್ಬರಿಂದ ಹೊಡೆಸಿಕೊಳ್ಳಬೇಕಾಗಿ ಬರಬಹುದು. ಆದರೆ, ಮುಂದಿನ ಜನ್ಮಕ್ಕೆ ನೀವು ಕರ್ಮವನ್ನು ಕಟ್ಟಿಕೊಳ್ಳುವುದಿಲ್ಲ. ಯಾಕೆಂದರೆ, ಸೂಕ್ಷ್ಮ-ಕರ್ಮ ಭಾಗದಲ್ಲಿ, ನಿಮ್ಮ ಭಾವನೆಯಲ್ಲಿ, 'ಕ್ರೋಧಗೊಳ್ಳಲೇ ಬಾರದು' ಎನ್ನುವಂತಹ ದೃಢ ನಿಶ್ಚಯವನ್ನು ನೀವು ತೆಗೆದುಕೊಳ್ಳಲಾಗಿದೆ.

ಇನ್ನೂ ಕೆಲವರು ಯಾರ ಮೇಲೂ ಕ್ರೋಧಗೊಳ್ಳಲು ಹೋಗುವುದಿಲ್ಲ. ಆದರೆ, ಅವರ ಮನಸ್ಸಿನಲ್ಲೇ ವಿಚಾರ ಮಾಡಲಾಗುತ್ತದೆ, 'ಇಂತಹ ಜನರೊಂದಿಗೆ ಕ್ರೋಧಗೊಂಡು ವರ್ತಿಸಿದಾಗಲೇ ಅವರು ಸರಿಯಾಗುವುದು.' ಎನ್ನುವಂತಹ

ಭಾವನೆಯು ಅವರೊಳಗೆ ಇದ್ದಾಗ ಅಂಥವರು ಮುಂದಿನ ಜನ್ಮದಲ್ಲಿ ಬಹಳ ಕ್ರೋಧ ಉಳ್ಳವರಾಗಿರುತ್ತಾರೆ.! ಹಾಗಾಗಿ, ನಾವು ತಿಳಿದುಕೊಳ್ಳಬೇಕಾಗಿರುವುದು ಏನೆಂದರೆ, ಹೊರಗೆ ಎಷ್ಟೇ ಕ್ರೋಧ ವ್ಯಕ್ತವಾದರೂ, ಅದು ಸ್ಥೂಲ-ಕರ್ಮವಾಗಿದೆ ಹಾಗೂ ಆ ಸಮಯದಲ್ಲಿ ನಮ್ಮೊಳಗಿನ ಭಾವನೆ ಏನಿದೆ, ಅದು ಸೂಕ್ಷ್ಮ-ಕರ್ಮವಾಗಿದೆ. 'ಸ್ಥೂಲ-ಕರ್ಮದಿಂದಾಗಿ ಮುಂದಿನ ಜನ್ಮಕ್ಕೆ ಕರ್ಮ ಕಟ್ಟಿಕೊಳ್ಳುವುದಿಲ್ಲ.' ಎನ್ನುವಂತಹ ತಿಳುವಳಿಕೆ ಜನರಿಗೆ ನಿಜವಾಗಿ ಸಿಗಬೇಕು. ಹಾಗಾಗಿಯೇ ನಾವು (ಜ್ಞಾನಿ ಪುರುಷರು), ಈ 'science' ('ವಿಜ್ಞಾನವನ್ನು') ಹೊಸ ವಿಧಾನದಿಂದ ತೋರಿಸಿಕೊಡಲಾಗಿದೆ. ಇಲ್ಲಿಯವರೆಗೂ ಸ್ಥೂಲ-ಕರ್ಮದಿಂದಲೇ ಮುಂದಿನ ಜನ್ಮಕ್ಕೆ ಕರ್ಮ ಬಂಧನವೆಂದು ಜನರ ತಲೆಗೆ ತುಂಬಿಸಲಾಗಿದೆ. ಅಂತಹ ತಪ್ಪು ತಿಳುವಳಿಕೆಯಿಂದಾಗಿಯೇ ಜನರು ಇನ್ನೂ ಸಂಸಾರದಲ್ಲೇ ಅಲೆದಾಡಿಕೊಂಡು ಇರಬೇಕಾಗಿದೆ.

## ಭೇದಜ್ಞಾನದಿಂದ ನಾಶವಾಗುವವು ಕ್ರೋಧ-ಮಾನ-ಮಾಯಾ-ಲೋಭಗಳೆಂಬ ಕಷಾಯಗಳು...

**ಪ್ರಶ್ನಕರ್ತ:** ಯಾವ ಈ ನಾಲ್ಕು, ಕ್ರೋಧ-ಮಾನ-ಮಾಯಾ-ಲೋಭ ಕಷಾಯಗಳನ್ನು ಗೆಲ್ಲಲು ನಾವು ಏನಾದರು ಪ್ರಾಥಮಿಕ ತಯಾರಿಯನ್ನು ಮಾಡಕೊಳ್ಳಬೇಕಾಗಿರುವ ಅಗತ್ಯವಿದೆಯೇ? ಅಗತ್ಯವಿದೆಯೆಂದಾದರೆ, ಅದಕ್ಕಾಗಿ ನಾವೇನು ಮಾಡಬೇಕು?

**ದಾದಾಶ್ರೀ:** ಅದೇನೆಂದರೆ, ಇವು ನಾಲ್ಕು, ಕ್ರೋಧ-ಮಾನ-ಮಾಯಾ-ಲೋಭ ತನ್ನಿಂದ ಹೊರಟು ಹೋದರೆ, ಆಗ ತಾನೇ ಭಗವಂತ!

ತೀರ್ಥಂಕರರು ವಿವರಿಸಲಾಗಿರುವುದನ್ನು ನಾವು ಉದಾಹರಣೆಯೊಂದಿಗೆ ತಿಳಿದುಕೊಳ್ಳುವುದಾದರೆ, ಈಗ ನೀವು ಕ್ರೋಧವನ್ನು ನಿಮ್ಮ ಮಾವನ ಮೇಲೆ ತೋರಿಸಿದರೆ, ಆಗ ಅವರ ಮನಸ್ಸು ನಿಮ್ಮಿಂದ ದೂರವಿರಲು ಬಯಸುತ್ತದೆ. ಜೀವನವಿಡೀ ನಿಮ್ಮಿಂದ ಅವರನ್ನು ದೂರ ಮಾಡಿಬಿಡುವಂತಹ ನಿಮ್ಮ ಅತಿಯಾದ ಕ್ರೋಧ ಏನಿದೆ, ಅದು ತಪ್ಪು. ಹಾಗೂ ಮತ್ತೊಂದು ರೀತಿಯ ಕ್ರೋಧದಲ್ಲಿ ನೀವು ಕ್ರೋಧಗೊಂಡಿರುವುದರಿಂದ ಸ್ವಲ್ಪ ಮನಸ್ತಾಪ ಉಂಟಾಗಿ ಒಂದೆರಡು ವರ್ಷ

ದೂರವಾಗಿದ್ದರೂ, ಮತ್ತೆ ಪರಸ್ಪರ ಒಂದಾಗಿ ಬಿಡಲಾಗುವುದು. ಅಂತಹ ಕ್ರೋಧವನ್ನು 'ಅಪ್ರತ್ಯಾಖ್ಯಾನಿ' (ತನ್ನ ತಪ್ಪಿನ ಬಗ್ಗೆ ತಾನು ಪಶ್ಚಾತ್ತಾಪ ಮಾಡಿಗೊಳ್ಳದಿರುವ) ಕ್ರೋಧವೆಂದು ಕರೆಯಲಾಗುವುದು. ಯಾವಾಗ ಅತಿಯಾದ ಕ್ರೋಧದಿಂದಾಗಿ ಮತ್ತೊಬ್ಬರೊಂದಿಗೆ ಮನಸ್ಸನ್ನು ಸಂಪೂರ್ಣವಾಗಿ ಮುರಿದು ಬೀಳುವುದೋ, ಅಂತಹ ಕ್ರೋಧವು ಕೀಳು ದರ್ಜೆಯ useless (ಅನಾವಶ್ಯಕ) ಕ್ರೋಧವೆಂದು ಕರೆಯಲಾಗುವುದು. ಅದನ್ನು 'ಅನಂತಾನುಬಂಧಿ' (ಅನೇಕ ಜನ್ಮಗಳವರೆಗೂ ಉಳಿದುಕೊಳ್ಳುವ) ಕ್ರೋಧವೆಂದು ಕರೆಯಲಾಗುವುದು. ಅದೇ ರೀತಿ ಲೋಭದ ವಿಚಾರದಲ್ಲಾಗಲಿ, ಮಾನದ ವಿಚಾರದಲ್ಲಾಗಲಿ ಅನಂತ ಜನ್ಮಗಳವರೆಗೂ ಕರ್ಮದ ಬಂಧನ ಉಂಟಾಗುವುದು. ಇವೆಲ್ಲಾ ಘೋರ ಕಷಾಯಗಳಾಗಿವೆ. ಅವು ಹೊರಟು ಹೋದಾಗಷ್ಟೇ ಮನುಷ್ಯ ಸರಿಯಾದ ಆತ್ಮಜ್ಞಾನದ ದಾರಿಗೆ ಬರಲಾಗುವುದು. ಆಗ, ಮೋಕ್ಷದ ಹಾದಿಯ ಹದಿನಾಲ್ಕು ಗುಣ ಸ್ಥಾನಗಳ ಪ್ರಗತಿಯ ಮೆಟ್ಟಿಲುಗಳನ್ನು ಒಂದರ ನಂತರ ಒಂದನ್ನು ಏರಲಾಗುವುದು. ಎಲ್ಲಾ ಬಗೆಯ ಘೋರ ಕಷಾಯಗಳು ಹೊರಟು ಹೋಗದೆ ಮೋಕ್ಷದ ಗುಣ ಸ್ಥಾನದ ಪ್ರಗತಿಯಲ್ಲಿ ಸಾಗಲು ಸಾಧ್ಯವಿಲ್ಲ! ಕ್ರೋಧ-ಮಾನ-ಮಾಯಾ-ಲೋಭ, ಕೇವಲ ಇವು ನಾಲ್ಕು 'ಅನಂತಾನುಬಂಧಿ' ಕಷಾಯಗಳು ಹೊರಟು ಹೋಗಬೇಕಾಗಿದೆ ಅಷ್ಟೇ. ನಂತರ ಮೋಕ್ಷ ಮಾರ್ಗದ ಪ್ರಗತಿಯಲ್ಲಿ ನಿಮಗೆ ಯಾವ ಬಾಧಕವೂ ಇರುವುದಿಲ್ಲ.

ಅವುಗಳ ನಿರ್ಮೂಲನೆ ಕೇವಲ 'ಜಿನ್' (ಆತ್ಮಜ್ಞಾನಿಯ) ಮಾತುಗಳನ್ನು ಆಲಿಸುವುದರಿಂದ ಅವುಗಳು ಹೊರಟುಹೋಗುತ್ತವೆ. ಜಿನ್ ಅಂದರೆ, ಆತ್ಮಜ್ಞಾನಿ. ಆತ್ಮಜ್ಞಾನಿ ಯಾವುದೇ ಧರ್ಮದವರಾಗಿದ್ದರೂ ಸರಿ. ಅವರು ವೇದಾಂತ ರೀತಿಯಿಂದ ಬರಲಾಗಿರುವ ಆತ್ಮಜ್ಞಾನಿಯಾಗಿರಬಹುದು ಅಥವಾ ಜೈನ ಧರ್ಮದ ರೀತಿಯಿಂದ ಬರಲಾಗಿರುವವರೋ ಅಥವಾ ಯಾವುದೇ ಧರ್ಮದಿಂದ ಬಂದಿರುವವರಾಗಿದ್ದರೂ, ತೊಂದರೆಯಿಲ್ಲ. ಆದರೆ, ಅವರು ಆತ್ಮಜ್ಞಾನಿಯಾಗಿರಬೇಕು. ಅಂಥವರ ಆಧ್ಯಾತ್ಮಿಕದ ವಿಚಾರಧಾರೆಯನ್ನು ಆಲಿಸಿದಾಗ, 'ತಾನು' ಶ್ರಾವಕನಾಗಲು ಸಾಧ್ಯ. ಯಾವಾಗ ಶ್ರಾವಕನಾಗುವನೋ ಆಗ ಅವನ 'ಅನಂತಾನುಬಂಧಿ' ಕಷಾಯಗಳು ನಾಶವಾಗುತ್ತವೆ. ನಂತರ 'ಕ್ಷಯೋಉಪಕ್ಷಮ್' (ಉಳಿದುಕೊಂಡಿರುವ ಶೇಷ ಕಷಾಯಗಳು) ಅದರಷ್ಟಕ್ಕೆ

ಹೊರಗೆ ವರ್ತನೆಯಲ್ಲಿ ವ್ಯಕ್ತಗೊಂಡು ನಾಶವಾಗುತ್ತವೆ. ಇದು ಒಂದು ರೀತಿಯ ಕ್ರಮ ಮಾರ್ಗದ ಉಪಾಯ.

ಈಗ ಮತ್ತೊಂದು ಉಪಾಯವೇನೆಂದರೆ, ನಾವು (ಜ್ಞಾನಿ ಪುರುಷರು) 'ಭೇದಜ್ಞಾನ'ವೆಂಬ ಪ್ರಯೋಗದ ಮೂಲಕ ನಿಮ್ಮನ್ನು ಕಷಾಯಗಳಿಂದ ಬೇರ್ಪಡಿಸಿ, ನಿಜ ಸ್ವರೂಪದ ಆತ್ಮಾನುಭವವು ನಿಮಗೆ ಉಂಟಾಗುವಂತೆ ಮಾಡಲಾಗುವುದು. ಅದರ ನಂತರ ನಿಮ್ಮೊಳಗಿರುವ ಎಲ್ಲಾ ಬಗೆಯ ಕಷಾಯಗಳು ದುರ್ಬಲಗೊಳ್ಳುತ್ತಾ ಕೊನೆಗೆ ಸಂಪೂರ್ಣವಾಗಿ ನಾಶವಾಗುತ್ತವೆ. ಇಂತಹ ಜ್ಞಾನದ ಉಪಾಯವು ಈ ಕಾಲದಲ್ಲಿ ಆಶ್ಚರ್ಯವೆಂದೇ ಹೇಳಬೇಕು! ಹಾಗಾಗಿಯೇ ಇದನ್ನು ಅಕ್ರಮ ವಿಜ್ಞಾನವೆಂದು ನಾವು ಕರೆಯಲಾಗಿದೆ! ಅಕ್ರಮ ವಿಜ್ಞಾನ ಅಂದರೆ, ಯಾವುದೇ ಬಗೆಯ ಕ್ರಮವಿಲ್ಲದ ವಿಜ್ಞಾನ!

-ಜೈ ಸಚ್ಚಿದಾನಂದ್.

***********

# ಸಂಪರ್ಕಿಸಿ

## ದಾದಾ ಭಗವಾನ್ ಪರಿವಾರ


ಅಡಾಲಜ್ : ತ್ರಿಮಂದಿರ್ ಸಂಕುಲ್, ಸಿಮಂಧರ್ ಸಿಟಿ, ಅಹಮದಾಬಾದ್-ಕಲೋಲ್ ಹೈವೇ,
ಪೋಸ್ಟ್: ಅಡಾಲಜ್, ಜಿ. ಗಾಂಧಿನಗರ, ಗುಜರಾತ್- –382421.

ಫೋನ್ : (079) 39830100, Email: info@dadabhagwan.org


## ಕರ್ನಾಟಕ :

| ಬೆಂಗಳೂರು : | ಹುಬ್ಬಳ್ಳಿ : | ಬೆಳಗಾವಿ : |
|---|---|---|
| 9590979099 | 9513216111 | 9945894202 |

| | | | |
|---|---|---|---|
| Kolkata: | 9830093230 | Delhi: | 9810098564 |
| Jaipur: | 9351408285 | Chennai: | 7200740000 |
| Bhopal: | 9425024405 | Patna: | 7352723132 |
| Indore: | 9039936173 | Amravati: | 9422915064 |
| Raipur: | 9329644433 | Bangalore: | 9590979099 |
| Chandigarh: | 9780732237 | Hyderabad: | 9989877786 |
| Kanpur: | 9452525981 | Pune: | 9422660497 |
| Bhubaneswar | 8763073111 | Jalandhar: | 9814063043 |
| Varanasi: | 9795228541 | Sangli: | 9423870798 |

| | |
|---|---|
| USA: Dada Bhagwan Vignan Institute<br>Tel:+1-877-505-DADA(3232)<br>Email: info@us.dadsbhaowan.org | U.K:DadaDarshan(UK)<br>Tel:+44 330-111-DADA(3232)<br>Email:info@uk.dadabhagwan.org |
| Germany : +49 700 32327474<br>UAE : +97 1557316937<br>Kenya : +25 4722722063<br>Dubai : +971 501364530 | Australia : +61 421127947<br>Singapore : +65 81129229<br>New Zealand: +64 210376434 |

Website : www.dadabhagwan.org



## ಕ್ರೋಧಗೊಳ್ಳುವ ತಾಪಕ್ಕಿಂತಲೂ ಶೀಲವಂತರ ತಾಪ ಅಸಾಧಾರಣ!

ಕ್ರೋಧ-ಮಾನ-ಮಾಯಾ-ಲೋಭ, ಇವೆಲ್ಲಾ ಮನುಷ್ಯನಲ್ಲಿರುವ ದೌರ್ಬಲ್ಯಗಳು. ಬಲಶಾಲಿಗೆ ಕ್ರೋಧಗೊಳ್ಳುವ ಅವಶ್ಯಕತೆ ಏನಿದೆ? ಆದರೆ, ತನ್ನಲ್ಲಿರುವ ದೌರ್ಬಲ್ಯದಿಂದಾಗಿ ಕ್ರೋಧಗೊಳ್ಳಲಾಗುವುದು. ಕ್ರೋಧದ ತಾಪ ತೋರ್ಪಡಿಸಿ ಮತ್ತೊಬ್ಬರನ್ನು ವಶಪಡಿಸಿಕೊಳ್ಳಲು ಪ್ರಯತ್ನಿಸಲಾಗುವುದು. ನಿಜವಾಗಿ, ಯಾರಲ್ಲಿ ಕ್ರೋಧವಿಲ್ಲವೋ, ಅಂಥವರಲ್ಲಿ ಏನೋ ಒಂದು ವಿಶೇಷತೆ ಇರಬೇಕಲ್ಲವೇ?! ಅವರಲ್ಲಿರುವ ಶೀಲವಂತ ಚಾರಿತ್ರ್ಯದಿಂದಾಗಿ, ಕ್ರೂರ ಪ್ರಾಣಿಗಳು ಕೂಡಾ ಅವರ ವಶವಾಗುತ್ತವೆ! ಸಿಂಹ, ಹುಲಿ ಹಾಗೂ ಶತ್ರುಗಳು ಇಡೀ ಸೇನೆಯೇ ವಶವಾಗುವುದು.

-ದಾದಾಶ್ರೀ

मूल दीपक से प्रकटे दीपमाला

dadabhagwan.org

9 789391 375577

Printed in India

Price ₹40

Kannada